# ಬೃಹದಾರಣ್ಯಕೋಪನಿಷತ್

## ಮೂಲ ಪ್ರತಿಪದಾರ್ಥ
## ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು–೨

ಪ್ರಕಾಶಕರು

ಅಧ್ಯಕ್ಷ

ಶ್ರೀರಾಮಕೃಷ್ಣಾಶ್ರಮ
ಮೈಸೂರು

ಮೊದಲನೆಯ ಪ್ರಕಾಶನ ೧೯೫೯
ಎರಡನೆಯ ಪ್ರಕಾಶನ ೧೯೭೩

ಮುದ್ರಕರು

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

# ಪ್ರಸ್ತಾವನೆ

ಬೃಹದಾರಣ್ಯಕೋಪನಿಷತ್ತು ಗಾತ್ರದಿಂದಲೂ ವಿಷಯಸಮೃದ್ಧಿಯಿಂದಲೂ ಅತ್ಯಂತ ಬೃಹತ್ತಾಗಿದೆ. ಉಪನಿಷತ್-ತತ್ತ್ವಗಳಿಗೆ ಇದು ಪ್ರಾಚೀನವಾದ ಆಕರವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಉಪನಿಷತ್ತು ಶುಕ್ಲಯಜುರ್ವೇದದ ಶತಪಥಬ್ರಾಹ್ಮಣಕ್ಕೆ ಸೇರಿದೆ. ಶತಪಥ-ಬ್ರಾಹ್ಮಣವು ಕಾಣ್ವ, ಮಾಧ್ಯಂದಿನ ಎಂಬ ಎರಡು ಶಾಖೆಗಳಾಗಿ ಒಡೆದು-ಕೊಂಡಿದೆ. ಕಾಣ್ವಶಾಖೆಗೆ ಹದಿನೇಳು ಕಾಂಡಗಳೂ ಮಾಧ್ಯಂದಿನ ಶಾಖೆಗೆ ಹದಿನಾಲ್ಕು ಕಾಂಡಗಳೂ ಇವೆ. ಪ್ರತಿಯೊಂದು ಕಾಂಡವೂ ಅನೇಕ ಅಧ್ಯಾಯಗಳನ್ನು ಒಳಕೊಂಡಿದೆ ಬೃಹದಾರಣ್ಯಕೋಪನಿಷತ್ತಿನ ಆರು ಅಧ್ಯಾಯಗಳು ಈಗ ಕಾಣ್ವಶಾಖೆಯ ಹದಿನೇಳನೆಯ ಕಾಂಡದ ೩–೮ ಅಧ್ಯಾಯಗಳಾಗಿಯೂ ಮಾಧ್ಯಂದಿನ ಶಾಖೆಯ ಹದಿನಾಲ್ಕನೆಯ ಕಾಂಡದ ೪–೯ ಅಧ್ಯಾಯಗಳಾಗಿಯೂ ಕಂಡುಬರುತ್ತದೆ. ಶ್ರೀಶಂಕರಾಚಾರ್ಯರು ಕಾಣ್ವ-ಶಾಖೆಯನ್ನೇ ಅನುಸರಿಸಿ ತಮ್ಮ ಬೃಹದ್-ಭಾಷ್ಯವನ್ನು ರಚಿಸಿದ್ದರೂ ಸೂತ್ರ-ಭಾಷ್ಯಾದಿಗಳಲ್ಲಿ ಮಾಧ್ಯಂದಿನ ಶಾಖೆಯನ್ನು ಅನುಸರಿಸಿರುವುದು ಕಂಡುಬರುತ್ತದೆ. ನಾವು ಇಲ್ಲಿ ಕಾಣ್ವಪಾಠವನ್ನೇ ಅನುಸರಿಸಿರುತ್ತೇವೆ.

ಬೃಹದಾರಣ್ಯಕೋಪನಿಷತ್ತಿನ ಆರು ಅಧ್ಯಾಯಗಳು ನಲವತ್ತೇಳು ಖಂಡಗಳಾಗಿ ವಿಭಾಗಿಸಲ್ಪಟ್ಟಿವೆ; ಇವುಗಳನ್ನು ಬ್ರಾಹ್ಮಣಗಳೆಂದು ಕರೆಯುತ್ತಾರೆ. ಈ ಬ್ರಾಹ್ಮಣಗಳು ಪುನಃ ಸಣ್ಣ ಸಣ್ಣ ಪರಿಚ್ಛೇದಗಳಾಗಿ ವಿಂಗಡಿಸಲ್ಪಟ್ಟಿವೆ; ಇವುಗಳು ಕಂಡಿಕೆಗಳೆಂದು ಕರೆಯಲ್ಪಟ್ಟಿವೆ. ಈ ಉಪನಿಷತ್ತನ್ನು ಇನ್ನೊಂದು ಬಗೆಯಾಗಿ ವಿಂಗಡಿಸಬಹುದು: ಮಧುಕಾಂಡ, ಯಾಜ್ಞ-ವಲ್ಕ್ಯಕಾಂಡ ಅಥವಾ ಮುನಿಕಾಂಡ, ಖಿಲಕಾಂಡ. ಪ್ರತಿಯೊಂದು ಕಾಂಡವೂ ಎರಡೆರಡು ಅಧ್ಯಾಯಗಳನ್ನು ಒಳಗೊಂಡಿದೆ. ಈ ಮೂರು ಕಾಂಡಗಳು ಉಪದೇಶ-ಉಪಪತ್ತಿ-ಉಪಾಸನೆಗಳನ್ನು ನಿರೂಪಿಸುತ್ತವೆಂದು ಶ್ರೀವಿದ್ಯಾ-ರಣ್ಯರು ತಮ್ಮ ವಾರ್ತಿಕಸಾರದಲ್ಲಿ ಹೇಳಿರುತ್ತಾರೆ.

ಮೊದಲನೆಯ ಎರಡು ಅಧ್ಯಾಯಗಳು ಬಹುದೇವತೋಪಾಸನೆಯನ್ನು ಮೀರಿರುವ ಆತ್ಮತತ್ತ್ವವನ್ನು ಪ್ರತಿಪಾದಿಸುತ್ತವೆ. ಮೂರನೆಯ

ಮತ್ತು ನಾಲ್ಕನೆಯ ಅಧ್ಯಾಯಗಳು ಈ ಉಪನಿಷತ್ತಿನ ಸಾರವನ್ನು ಒಳಕೊಂಡಿವೆ. ಯಾಜ್ಞವಲ್ಕ್ಯನು ಈ ಅಧ್ಯಾಯಗಳಲ್ಲಿ ಆತ್ಮ-ಬ್ರಹ್ಮತತ್ತ್ವವನ್ನು ಅತ್ಯಂತ ವಿಸ್ತಾರವಾಗಿಯೂ ವಿಶದವಾಗಿಯೂ ಸೂಕ್ಷ್ಮವಾಗಿಯೂ ವಿವರಿಸಿರುತ್ತಾನೆ. ಜಗತ್ತಿನ ಅನೇಕಭಾಗಗಳಲ್ಲಿ ತತ್ತ್ವೋದಯದ ಕನಸೇ ಇಲ್ಲದಿದ್ದಾಗ ಯಾಜ್ಞವಲ್ಕ್ಯನು ಎಂಥ ಶ್ರೇಷ್ಠನಾದ ಕ್ರಾಂತಿದರ್ಶಿಯೂ ದರ್ಶನಕಾರನೂ ಆಗಿದ್ದನೆಂದು ಇಲ್ಲಿ ತಿಳಿಯಲು ನಮಗೆ ಆಶ್ಚರ್ಯವಾಗುತ್ತದೆ. ಪಾಶ್ಚಾತ್ಯ ಪಂಡಿತವರ್ಯನಾದ ಗೆಡನ್ (A. S. Geden) ಮಹಾಶಯನು ಯಾಜ್ಞವಲ್ಕ್ಯನ ಪ್ರತಿಭೆಯನ್ನು ಹೀಗೆ ಕೊಂಡಾಡಿರುತ್ತಾನೆ[1]

**If the name represents a real individuality, and is not merely a title under whose shelter many convergent thoughts and reasoning have found expression Yājña-valkya may claim a place** ***with the greatest thinkers of the world or of any age.'***

ಕೊನೆಯ ಎರಡು ಅಧ್ಯಾಯಗಳಲ್ಲಿ ಕೆಲವು ಉಪಾಸನೆಗಳನ್ನೂ ಉತ್ಕ್ರಾಂತಿಯ ಕ್ರಮವನ್ನೂ ಹೇಳಿದೆ.

## ಮೊದಲನೆಯ ಅಧ್ಯಾಯ

ಇಲ್ಲಿಯವರೆಗೆ ಬೃಹದಾರಣ್ಯಕೋಪನಿಷತ್ತಿನ ರೂಪರೇಖೆಗಳನ್ನು ಸಂಕ್ಷೇಪವಾಗಿ ಪರಿಶೀಲಿಸಿದ್ದಾಯಿತು. ಈಗ ಉಪನಿಷತ್ತಿನ ಮುಖ್ಯವಿಷಯಗಳನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳಲು ಪ್ರಯತ್ನಿಸಬಹುದು ಮೊದಲನೆಯ ಅಧ್ಯಾಯಕ್ಕೆ ಆರು ಬ್ರಾಹ್ಮಣಗಳಿವೆ. ಮೊದಲನೆಯದಕ್ಕೆ ಅಶ್ವ-ಬ್ರಾಹ್ಮಣವೆಂದು ಹೆಸರು ಇದು ಯಜ್ಞಕ್ಕೆ ಅರ್ಹವಾದ ಕುದುರೆಯ ಶರೀರವನ್ನು ಅಶ್ವಮೇಧಯಜ್ಞದ ದೇವತೆಯಾದ ಪ್ರಜಾಪತಿಯ ವಿರಾಡ್ರೂಪವಾಗಿ ವರ್ಣಿಸುತ್ತದೆ ಪ್ರಜಾಪತಿಯ ರೂಪವಾಗಿರುವ ಕಾಲ—ಲೋಕ—ದೇವತೆಗಳನ್ನು ಯಜ್ಞಪಶುವಾದ ಕುದುರೆಯಲ್ಲಿ ಅಧ್ಯಾರೋಪಿಸಿದರೆ ಪಶುವೇ ಪ್ರಜಾಪತಿಯಾಗುತ್ತದೆಂದು ಭಾಷ್ಯಕಾರರು ಅಭಿಪ್ರಾಯಪಡುತ್ತಾರೆ. ಅಶ್ವ-

---

1 *Encyclopaedia of Relegion and Ethics*, Vol XII, p 542

ಮೇಧದಲ್ಲಿ ಅಧಿಕಾರವಿಲ್ಲದವರಿಗೂ ಕೂಡ ಈ ಉಪಾಸನೆಯಿಂದ ಅಶ್ವಮೇಧದ ಫಲವು ದೊರಕುವುದು. ಅಶ್ವಮೇಧಕರ್ಮವು ವೈದಿಕಯಜ್ಞಗಳಲ್ಲೆಲ್ಲ ಅತ್ಯಂತ ಪ್ರಧಾನವಾದದು ಇದರ ಫಲ ಬ್ರಹ್ಮಲೋಕಪ್ರಾಪ್ತಿ ಆದರೆ ಈ ಫಲವು ಅನಿತ್ಯವಾದುದು ಮತ್ತು ಮಿಕ್ಕ ವೈದಿಕಕರ್ಮಗಳಂತೆ ನಮ್ಮ ಅಜ್ಞಾನವನ್ನು ನಾಶಪಡಿಸಲು ಅಸಮರ್ಥವಾಗಿದೆ. ನಮ್ಮ ಅಜ್ಞಾನವನ್ನು ನಾಶಮಾಡಿ ಸಂಸಾರವನ್ನು ತಪ್ಪಿಸಲು ಬ್ರಹ್ಮಜ್ಞಾನಕ್ಕೆ ಮಾತ್ರ ಸಾಧ್ಯ. ಆದುದರಿಂದ ವಿರಕ್ತನಾದವನಿಗೆ ಕಾಮಾದಿದೋಷಗಳಿಗೂ ಕರ್ಮಕ್ಕೂ ಕಾರಣವಾಗಿರುವ ಅವಿದ್ಯೆಯು ನಾಶವಾಗಲೆಂದು—ಹಗ್ಗದಲ್ಲಿ ಉಂಟಾಗಿರುವ ಹಾವಿನ ಭಾವನೆಯನ್ನು ತೊಲಗಿಸುವಂತೆ—ಉಪನಿಷತ್ತು ಬ್ರಹ್ಮವಿದ್ಯೆಯನ್ನು ಪ್ರಾರಂಭಿಸಿರುತ್ತದೆ.

ಮೊದಲನೆಯ ಅಧ್ಯಾಯದ ಎರಡನೆಯ ಖಂಡಕ್ಕೆ ಅಗ್ನಿಬ್ರಾಹ್ಮಣವೆಂದು ಹೆಸರು. ಇದು ಅಶ್ವಮೇಧದಲ್ಲಿ ಉಪಯೋಗಿಸುವ ಅಗ್ನಿಯ ಉತ್ಪತ್ತಿಯನ್ನೂ ಜಗತ್ತಿನ ವಿಕಸನವನ್ನೂ ವಿವರಿಸುತ್ತದೆ. ಪಿಂಡಾವಸ್ಥೆಯಲ್ಲಿರುವ ಮಣ್ಣಿನಿಂದ ಮಡಕೆ ಮೊದಲಾದುವು ಆವೃತವಾಗಿರುವಂತೆ ನಾಮ-ರೂಪಾತ್ಮಕವಾದ ಈ ಜಗತ್ತು ವ್ಯಕ್ತವಾಗುವುದಕ್ಕೆ ಮೊದಲು ಮೃತ್ಯುವಿನಿಂದ ಆವೃತವಾಗಿತ್ತು. ಮೃತ್ಯುವೇ ಹಿರಣ್ಯಗರ್ಭ ಅಥವಾ ಪ್ರಜಾಪತಿ. ಅಶ್ವದಂತೆ ಈ ಅಗ್ನಿಯನ್ನೂ ಪ್ರಜಾಪತಿಯಾಗಿ ಅಥವಾ ಪ್ರಥಮ ಶರೀರಿಯಾದ ವಿರಾಟ್ಪುರುಷನಾಗಿ ಉಪಾಸಿಸಬೇಕು. ಪುನರ್ಮರಣವನ್ನು ಹೊಂದದಿರುವುದೇ ಈ ಉಪಾಸನೆಯ ಫಲ

ಈ ಅಧ್ಯಾಯದ ಮೂರನೆಯ ಖಂಡಕ್ಕೆ ಉದ್ಗೀಥಬ್ರಾಹ್ಮಣವೆಂದು ಹೆಸರು ದೇವಾಸುರರಿಗೆ ಉಂಟಾದ ಸ್ಪರ್ಧೆಯನ್ನು ರೂಪಕವಾಗಿ ವಿವರಿಸುವಾಗ ಪ್ರಜಾಪತಿಭಾವವನ್ನು ಪಡೆಯಲು ಸಾಧನವಾದ ಉಪಾಸನಾಕರ್ಮಗಳನ್ನು ಈ ಬ್ರಾಹ್ಮಣವು ತಿಳಿಸುತ್ತದೆ. ವೇದೋಕ್ತವಾದ ಉಪಾಸನಾಕರ್ಮಗಳ ಫಲವೆಲ್ಲ ಸಂಸಾರವಿಷಯವೆಂಬುದೂ ಕೇವಲ ಬ್ರಹ್ಮವಿದ್ಯೆಯು ಮೋಕ್ಷಕ್ಕೆ ಕಾರಣವೆಂಬುದೂ ಸಿದ್ಧಾಂತ. ಆದುದರಿಂದ ಬ್ರಹ್ಮಜ್ಞಾನವು ಮಾತ್ರ ನಮ್ಮ ಅಜ್ಞಾನವನ್ನು ನಾಶಮಾಡಬಲ್ಲದು ಬಹುಸಂಖ್ಯಾತರಾದ ಅಸುರರನ್ನು ಜಯಿಸಲು ದೇವತೆಗಳು ಜ್ಯೋತಿಷ್ಟೋಮಯಜ್ಞದಲ್ಲಿ

ವಾಗಿಂದ್ರಿಯ, ಮೂಗು, ಕಣ್ಣುಗಳು. ಕಿವಿಗಳು, ಮನಸ್ಸು—ಇವುಗಳನ್ನು ಉದ್ಗೀಥವನ್ನು ಹಾಡಬೇಕೆಂದು ಒಂದಾದಮೇಲೊಂದರಂತೆ ಕೇಳಿಕೊಂಡರು. ಇಂದ್ರಿಯಗಳು ಒಪ್ಪಿಕೊಂಡವು. ದೇವತೆಗಳು ತಮ್ಮನ್ನು ಈ ಉದ್ಗಾತೃಗಳ ಮೂಲಕ ಮೀರುವರೆಂದು ಅಸುರರು ತಿಳಿದುಕೊಂಡು ಅವುಗಳನ್ನು ಒಂದಾದ ಮೇಲೊಂದರಂತೆ ಸಂಗರೂಪವಾದ ಪಾಪದಿಂದ ಹೊಡೆದರು. ಆಮೇಲೆ ಪ್ರಾಣದ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆಯಲು ಪ್ರಯತ್ನಿಸಿದಾಗ ತಾವೇ ಮಣ್ಣಿನ ಹೆಂಟೆಯಂತೆ ಪುಡಿಪುಡಿಯಾದರು. ಪ್ರಾಣವು ಶರೀರೇಂದ್ರಿಯಗಳ ರಸವೆಂದೂ ಶರೀರೇಂದ್ರಿಯಗಳನ್ನು ಉಪಾಸಿಸದೆ ಪ್ರಾಣವನ್ನೇ ಉಪಾಸಿಸಬೇಕೆಂದೂ ಈ ರೂಪಕದಿಂದ ತಿಳಿದುಬರುತ್ತದೆ. ಇಂದ್ರಿಯಗಳ ಪಾಪವನ್ನು ಹೋಗಲಾಡಿಸಿ ಅವುಗಳ ದೇವತ್ವವನ್ನು ಪೂರ್ವಸ್ಥಿತಿಗೆ ಮತ್ತೆ ತಂದಿದ್ದು ಪ್ರಾಣವೇ. ವೇದರೂಪವಾದ ಪ್ರಾಣವೇ ವಿರಾಡ್ರೂಪದಲ್ಲಿ ಪ್ರಜಾಪತಿಯಾಗಿದೆ. ಪ್ರಾಣೋಪಾಸನೆಯು ಕರ್ಮರಹಿತವಾಗಿದ್ದರೂ ಪ್ರಜಾಪತಿಲೋಕವನ್ನು ಪಡೆಯುವಂತೆ ಮಾಡುವುದು.

ನಾಲ್ಕನೆಯ ಖಂಡಕ್ಕೆ ಪುರುಷವಿಧಬ್ರಾಹ್ಮಣವೆಂದು ಹೆಸರು. ಸೃಷ್ಟಿಗೆ ಮೊದಲು ಶರೀರಭೇದಸಮೂಹವೆಲ್ಲ ಅಂಡದಿಂದ ಹುಟ್ಟಿದ ಶರೀರಿಯೂ ವೈದಿಕಜ್ಞಾನಕರ್ಮಗಳ ಫಲವೂ ಆದ ಪ್ರಜಾಪತಿಯು ಶರೀರಕ್ಕಿಂತ ಬೇರೆಯಾಗಿರಲಿಲ್ಲ. ಅವನು ಒಬ್ಬನೇ ಇದ್ದುದರಿಂದ ಮನಸ್ಸಿನಲ್ಲಿ ಕಳವಳಪಟ್ಟು ಸಂಗಾತಿಯಾದ ಪತ್ನಿಯನ್ನು ಬಯಸಿದನು. ಅವನು ಸತ್ಯಸಂಕಲ್ಪನಾದುದರಿಂದ ಆಲಿಂಗಿತರಾದ ಸ್ತ್ರೀಪುರುಷರಷ್ಟು ದೊಡ್ಡವನಾದನು. ಹಾಲು ಮೊಸರಾಗಿ ತನ್ನ ಹಿಂದಿನ ರೂಪವನ್ನು ಬಿಡುವಂತೆ ಅವನು ತನ್ನ ಪೂರ್ವರೂಪವನ್ನು ಬಿಡಲಿಲ್ಲ. ಆವನು ಮೊದಲಿನಂತೆಯೇ ಇದ್ದು ತನಗಿಂತ ಬೇರೆಯಾದ ಮತ್ತೊಂದು ಶರೀರವನ್ನು ಸೃಷ್ಟಿಸಿ ಅದನ್ನು ಎರಡಾಗಿ ಮಾಡಿದನು. ಆ ವಿಭಜನೆಯಿಂದ ಪತಿ–ಪತ್ನಿಯರಾದರು. ಪುರುಷಾರ್ಧಕ್ಕೆ ಮನುವೆಂದೂ ಸ್ತ್ರೀ-ಅರ್ಧಕ್ಕೆ ಶತರೂಪೆಯೆಂದೂ ಹೆಸರಾಯಿತು. ಇವರ ಸಂಯೋಗದಿಂದ ಮನುಷ್ಯರು ಹುಟ್ಟಿದರು. ಇವರಿಬ್ಬರೂ ಬೇರೆ ಬೇರೆ ವರ್ಗದ ಸ್ತ್ರೀ-ಪುರುಷರಾಗಿ ಇರುವೆಯ ವರೆಗೆ ಸಮಸ್ತ ಪ್ರಾಣಿಗಳನ್ನೂ ಸೃಷ್ಟಿಸಿದರು. ತನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತು ತನಗಿಂತ ಅಭಿನ್ನವಾಗಿರುವುದರಿಂದ ತಾನೆ ಜಗ-

ತ್ತಾಗಿರುವೆನೆಂದು ಪ್ರಜಾಪತಿಯು ಅರಿತುಕೊಂಡನು. ಅನಂತರ ಅಗ್ನಿಯೇ ಮೊದಲಾದ ದೇವತೆಗಳನ್ನು ಸೃಷ್ಟಿಸಿದನು. ಅಗ್ನಿಷೋಮಾತ್ಮಕವಾದ ಈ ಜಗತ್ತೆಲ್ಲ ಅವನ ಸೃಷ್ಟಿಯಾಗಿದೆ.

ಆತ್ಮತತ್ತ್ವವು ಎಲ್ಲಕ್ಕಿಂತಲೂ ಅಂತರತಮವಾದುದರಿಂದ ಪುತ್ರ–ವಿತ್ತಾದಿಗಳಿಗಿಂತಲೂ ಪ್ರಿಯತರವಾಗಿದೆ. ಆತ್ಮನಿಗಿಂತ ಭಿನ್ನವಾದುದನ್ನು ಪ್ರಿಯವೆಂದು ಎಣಿಸುವವನ ಪ್ರಿಯವಸ್ತುವು ನಾಶವಾಗುವುದು. ಆತ್ಮನನ್ನೇ ಪ್ರಿಯವೆಂದು ಅರಿತುಕೊಂಡು **ಆತ್ಮನನ್ನೇ ಉಪಾಸಿಸಬೇಕು**(೧,೪,೭,). ಆತ್ಮನನ್ನೇ ಪ್ರಿಯವೆಂದು ಅರಿಯುವವನ ಪ್ರಿಯವಸ್ತುವು ನಾಶವಾಗುವುದಿಲ್ಲ ಸೃಷ್ಟಿಗೆ ಮೊದಲು ಅವ್ಯಾಕೃತವಾಗಿದ್ದ ಜಗತ್ತು ನಾಮರೂಪಗಳಿಂದ ವ್ಯಾಕೃತ ವಾಯಿತು ಅನಂತರ ಆತ್ಮನು—ಕತ್ತಿಯು ಕೋಶದಲ್ಲಿರುವಂತೆ, ಅಗ್ನಿಯು ಸೌದೆಯಲ್ಲಿರುವಂತೆ—ಸಮಸ್ತ ಶರೀರಗಳನ್ನು ನಖಾಗ್ರಗಳ ವರೆಗೆ ಪ್ರವೇಶಿಸಿ ಸಾಮಾನ್ಯರೂಪದಿಂದಲೂ ವಿಶೇಷದಿಂದಲೂ ಇರುತ್ತಾನೆ. ಅವನು ಪ್ರಾಣನಕ್ರಿಯೆಯನ್ನು ಮಾಡುವಾಗ ಪ್ರಾಣನೆಂದೂ ಮಾತಾಡುವಾಗ ವಾಕ್ಕೆಂದೂ ನೋಡುವಾಗ ಕಣ್ಣೆಂದೂ ಕೇಳುವಾಗ ಶ್ರೋತ್ರವೆಂದೂ ಮನನ ಮಾಡುವಾಗ ಮನಸ್ಸೆಂದೂ ಕರೆಯಲ್ಪಡುತ್ತಾನೆ. ಇವೆಲ್ಲ ಕರ್ಮವಿಶೇಷ ಗಳಿಂದ ಬಂದಿರುವ ಹೆಸರುಗಳು. ಕರ್ತೃತ್ವ, ಕರ್ಮ, ಫಲ ಮೊದಲಾದುವು ಅನಾದಿಯಾದ ಅವಿದ್ಯೆಯಿಂದ ಆತ್ಮನಲ್ಲಿ ಅಧ್ಯಾರೋಪಿತವಾಗಿದ್ದರೂ, ಆತ್ಮನು ತನ್ನ ಸ್ವರೂಪವನ್ನು ಎಂದಿಗೂ ಬಿಡುವುದಿಲ್ಲ. ಕಪ್ಪೆಯ ಚಿಪ್ಪು ಬೆಳ್ಳಿಯ ಹಾಗೆ ಕಾಣುವಂತೆ ಅಥವಾ ಆಕಾಶವು ನೀಲವಾಗಿ ಕಾಣುವಂತೆ ಆತ್ಮನು ಉಪಾಧಿಗಳಿಂದ ಕರ್ತೃ–ಭೋಕ್ತೃಗಳಂತೆ ಕಾಣುತ್ತಾನೆ. ಅವಿದ್ಯಾ–ನಾಶವೇ ಮುಕ್ತಿ. ಆತ್ಮಜ್ಞಾನವು ಅವಿದ್ಯಾಮೂಲವನ್ನು ಕಿತ್ತುಹಾಕಿ ಸಂಸಾರ ಚಕ್ರವನ್ನು ನಿಲ್ಲಿಸುವುದು. ಆದರೆ ಆತ್ಮಜ್ಞಾನವು ಹೊಸದಾಗಿ ಉಂಟಾಗತಕ್ಕ ಒಂದು ಕ್ರಿಯೆಯಲ್ಲ; ಅದು ಸಾಕ್ಷಾದಪರೋಕ್ಷವಾಗಿರುವ ಅರಿವು. ಆತ್ಮೋಪದೇಶವೇ ಎಲ್ಲ ಉಪನಿಷತ್ತುಗಳ ಉದ್ದೇಶ. ಅವಿದ್ಯೆಯು ಯಾವಾಗ ಪ್ರಾರಂಭಿಸಿತೆಂದು ಹೇಳಲು ಯಾರಿಗೂ ಸಾಧ್ಯವಿಲ್ಲ; ಏಕೆಂದರೆ ಕಾಲವೂ ಕೂಡ ಅವಿದ್ಯೆಯ ಒಂದು ಕಾರ್ಯವಾಗಿದೆ. ಆದರೆ ಅವಿದ್ಯೆಯನ್ನು ಖಂಡಿತವಾಗಿ ಕೊನೆಗಾಣಿಸಬಹುದೆಂದು ಆತ್ಮಜ್ಞಾನಿಗಳು ಸ್ವಾನುಭವದಿಂದ

ಹೇಳಿರುತ್ತಾರೆ. ಶರೀರದಲ್ಲಿ ಜೀವಾತ್ಮನೆಂದು ಹೇಳಲ್ಪಡುವುದು ತತ್ತ್ವವನ್ನು ಅರಿತುಕೊಳ್ಳುವ ಮುನ್ನ ಬ್ರಹ್ಮನೇ ಆಗಿತ್ತು. ಆದರೆ ಅದು ಅಜ್ಞಾನದಿಂದ 'ನಾನು ಅಬ್ರಹ್ಮ, ಅಸರ್ವ' ಎಂದು ತನ್ನಲ್ಲಿ ಅಧ್ಯಾರೋಪಿಸಿಕೊಂಡಿತು. ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ ಅನೇಕರು ಬ್ರಹ್ಮಭಾವವನ್ನು ಪಡೆದಿದ್ದರು. ಋಷಿ ವಾಮದೇವನು ಜೀವಾತ್ಮನನ್ನೇ ಪರಮಾತ್ಮನೆಂದು ಅರಿತುಕೊಂಡನು, 'ನಾನು ಮನು ಮತ್ತು ಸೂರ್ಯ'(ಋಗ್ವೇದ ೪,೨೬,೧) ಎಂದು ಸಾರಿಹೇಳಿದನು ಬ್ರಹ್ಮಭಾವವನ್ನು ಯಾರು ಬೇಕಾದರೂ ಪಡೆಯಬಹುದು

ಇನ್ನು ದೇವತೆಗಳ ವರ್ಗೀಕರಣ : ದೇವತೆಗಳಲ್ಲಿ ಅಗ್ನಿಯು ಬ್ರಾಹ್ಮಣನು : ಇಂದ್ರ, ವರುಣ, ಸೋಮ, ಯಮ, ಈಶಾನ ಮೊದಲಾದವರು ಕ್ಷತ್ರಿಯರು; ವಸುಗಳು, ರುದ್ರರು, ಆದಿತ್ಯರು ಮೊದಲಾದವರು ವೈಶ್ಯರು : ಪೂಷನ್ ಶೂದ್ರನು. ಈ ನಾಲ್ಕು ದೇವಜಾತಿಗಳಿಂದ ನಾಲ್ಕು ಮನುಷ್ಯ-ಜಾತಿಗಳು ಹುಟ್ಟಿದವು. ಅಜ್ಞಾನಿಯು ಯಾವ ಜಾತಿಗಾದರೂ ಸೇರಿರಲಿ. ದೇವತೆಗಳಿಂದ ಪ್ರಾರಂಭಿಸಿ ಇರುವೆಯ ವರೆಗೆ, ಎಲ್ಲರಿಗೂ ಭೋಗ್ಯನಾಗುತ್ತಾನೆ. ಇವರೆಲ್ಲ ಪಂಚಯಜ್ಞಗಳ ಮೂಲಕ ದೇವತೆಗಳಿಗೆ, ಋಷಿಗಳಿಗೆ, ಪಿತೃಗಳಿಗೆ, ಮನುಷ್ಯರಿಗೆ ಮತ್ತು ಭೂತಗಳಿಗೆ ತಮ್ಮ ತಮ್ಮ ಋಣವನ್ನು ಸಲ್ಲಿಸಬೇಕೆಂದು ಹೇಳಿದೆ. ಮನುಷ್ಯಜೀವನವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವ ಕಾಮವು ಸಾಧ್ಯ-ಸಾಧನರೂಪದಿಂದ ಎರಡು ಬಗೆಯಾಗಿದೆ. ಪತ್ನೀ-ಪುತ್ರ-ವಿತ್ತ-ಕರ್ಮಾದಿಗಳು ಸಾಧನೆಗಳು. ಮನುಷ್ಯ-ಪಿತೃ-ದೇವ ಲೋಕಗಳು ಫಲವು. ಕಾಮದಿಂದ ಪ್ರೇರಿತನಾದ ಮನುಷ್ಯನು—ತಾನೇ ಹೆಣೆದುಕೊಂಡ ಗೂಡಿನಲ್ಲಿರುವ ರೇಶ್ಮೆಹುಳುವಿನಂತೆ—ಕರ್ಮಗಳಲ್ಲಿ ಸಿಕ್ಕಿ-ಬೀಳುತ್ತಾನೆ. ಆತ್ಮೋಪಾಸನೆಯೊಂದೇ ಮನುಷ್ಯನನ್ನು ಕಾಪಾಡಬಲ್ಲದು. ಜ್ಞಾನಿಯಾದವನು ಏಷಣೆಗಳಿಂದ ಮೇಲಕ್ಕೇಳಬೇಕು. ಯಾವನು ಆತ್ಮನೆಂಬ ಸ್ವಲೋಕವನ್ನು ಅರಿತುಕೊಳ್ಳದೆ ಈ ಲೋಕವನ್ನು ಬಿಡುವನೊ ಅವನಿಗೆ ಮಹಾ ನಷ್ಟವಾಗುವುದು.

ಐದನೆಯ ಖಂಡಕ್ಕೆ ಸಪ್ತಾನ್ನಬ್ರಾಹ್ಮಣವೆಂದು ಹೆಸರು. ಇಲ್ಲಿ ಅನ್ನವನ್ನು ಏಳಾಗಿ ವಿಂಗಡಿಸಿದೆ. ಇವುಗಳಲ್ಲಿ ಒಂದು ಅನ್ನವು ಎಲ್ಲರಿಗೂ ಸಾಮಾನ್ಯವಾಗಿದೆ; ಈ ಅನ್ನವೇ ಎಲ್ಲ ಪ್ರಾಣಧಾರಿಗಳಿಗೂ ಸ್ಥಿತಿಯನ್ನುಂಟು-

ಮಾಡಿದೆ. ಯಾವನು ಅದೃಷ್ಟಫಲಕ್ಕೋಸ್ಕರ ಕರ್ಮವನ್ನು ಮಾಡದೆ ತನ್ನ ಶರೀರಧಾರಣೆಗೋಸ್ಕರ ಅನ್ನವನ್ನು ತಿನ್ನುವನೋ ಅವನು ಪಾಪದಿಂದ ಮುಕ್ತನಾಗುವುದಿಲ್ಲ. ದೇವತೆಗಳಿಗಾಗಿ ಭಾಗಮಾಡಿಕೊಟ್ಟ ಎರಡು ಅನ್ನಗಳು ಹುತ-ಪ್ರಹುತ-ರೂಪದ ಅಥವಾ ದರ್ಶಪೂರ್ಣಮಾಸ-ರೂಪದ ಕರ್ಮಗಳಾಗಿವೆ. ಪಶುಗಳಿಗೆ ಕೊಟ್ಟ ಹಾಲೆಂಬುದು ಇನ್ನೊಂದು ಅನ್ನವು. ವಾಙ್ಮನಃ-ಪ್ರಾಣಗಳೆಂಬ ಉಳಿದ ಮೂರು ಅನ್ನಗಳನ್ನು ಪ್ರಜಾಪತಿ ಅಥವಾ ತಂದೆಯು ತನಗಾಗಿ ಇಟ್ಟುಕೊಂಡನು. ಇವೇ ಮೂರು ಲೋಕಗಳು, ಮೂರು, ವೇದಗಳು, ದೇವತೆಗಳು ಪಿತೃಗಳು ಮನುಷ್ಯರು, ತಾಯಿ ತಂದೆ ಸಂತತಿ ಮತ್ತು ಅರಿಯಲ್ಪಟ್ಟದ್ದು, ಅರಿಯಲ್ಪಡಬೇಕಾದುದು, ಅರಿಯಲ್ಪಡದಿರುವುದು. ವಾಙ್ಮನಪ್ರಾಣಗಳು ಇಡೀ ಜಗತ್ತನ್ನು ವ್ಯಾಪಿಸಿಕೊಂಡಿವೆ. ಯಾವನು ಪ್ರಜಾಪತಿಯ ಆತ್ಮಭೂತವಾದ ಅನ್ನಗಳನ್ನು ಪರಿಚ್ಛಿನ್ನವೆಂದು ಉಪಾಸಿಸುತ್ತಾನೆಯೊ ಅವನು ಪರಿಚ್ಛಿನ್ನವಾದ ಲೋಕವನ್ನು ಜಯಿಸಿಕೊಳ್ಳುತ್ತಾನೆ. ಯಾವನು ಇವನ್ನು ಅನಂತವೆಂದು ಉಪಾಸಿಸುತ್ತಾನೆಯೊ ಅವನು ಅನಂತರವಾದ ಲೋಕವನ್ನು ಜಯಿಸಿಕೊಳ್ಳುತ್ತಾನೆ.

ಸಂವತ್ಸರರೂಪನಾದ ಪ್ರಜಾಪತಿಯೇ ಕಾಲವು. ಇವನಿಂದ ಸೃಷ್ಟಿಸಲ್ಪಟ್ಟ ವಾಕ್ಕೇ ಮೊದಲಾದ ಇಂದ್ರಿಯಗಳು ಪರಸ್ಪರ ಸ್ಪರ್ಧಿಸಿ ತಮ್ಮ ತಮ್ಮ ಕರ್ಮಗಳನ್ನು ಬಿಡುವುದಿಲ್ಲವೆಂದು ನಿರ್ಧರಿಸಿದುವು. ಆದರೆ ಇವೆಲ್ಲ ಶ್ರಮ-ರೂಪವಾದ ಮೃತ್ಯುವಿನಿಂದ ಹಿಡಿಯಲ್ಪಟ್ಟವು. ಪ್ರಾಣವನ್ನು ಮಾತ್ರ ಹಿಡಿಯಲು ಮೃತ್ಯುವಿಗೆ ಸಾಧ್ಯವಾಗಲಿಲ್ಲ. ಅನಂತರ ಆಯಾಸಗೊಂಡ ಇಂದ್ರಿಯಗಳೆಲ್ಲ ಶ್ರೇಷ್ಠವಾದ ಪ್ರಾಣರೂಪವನ್ನು ಪಡೆದು ಮರ್ತ್ಯಶರೀರದಲ್ಲಿ ಅಮೃತವಾದುವು. ಹೀಗೆಯೇ ಅಗ್ನಿ ಆದಿತ್ಯ ಚಂದ್ರ ಮೊದಲಾದ ದೇವತೆಗಳು ತಮ್ಮ ದೈವವ್ಯಾಪಾರವನ್ನು ಬಿಡುವುದಿಲ್ಲವೆಂದು ನಿರ್ಧರಿಸಿದರು; ಆದರೆ ಅಧ್ಯಾತ್ಮರೂಪವಾದ ಪ್ರಾಣದಂತೆ ಆಧಿದೈವತರೂಪವಾದ ವಾಯುವಿಗೆ ಮಾತ್ರ ತನ್ನ ಕೆಲಸವನ್ನು ಸತತವಾಗಿ ಮಾಡಲು ಸಾಧ್ಯವಾಯಿತು. ಆದುದರಿಂದ ಪುರುಷನು 'ಸರ್ವಪ್ರಾಣಿಗಳಲ್ಲಿರುವ ವಾಕ್ಕೇ ಮೊದಲಾದುವೂ ಅಗ್ನಿಯೇ ಮೊದಲಾದುವೂ ನನ್ನ ಸ್ವರೂಪವೇ ಆಗಿರುತ್ತವೆ ; ನಾನೇ ಎಲ್ಲವನ್ನೂ ಪರಿಸ್ಪಂದಿಸುವ ಪ್ರಾಣಾತ್ಮನು' ಎಂದು ಪ್ರಾಣೋಪಾಸನೆಯನ್ನು

ಮಾಡಬೇಕು. ಪ್ರಾಣದೇವತೆಯೊಂದಿಗೆ ಸಾಯುಜ್ಯ ಅಥವಾ ಸಾಲೋಕ್ಯ ಈ ಉಪಾಸನೆಯ ಫಲ.

ಸಾಧ್ಯ–ಸಾಧನ–ಲಕ್ಷಣವುಳ್ಳ ವ್ಯಾಕೃತ–ಅವ್ಯಾಕೃತ-ಜಗತ್ತೆಲ್ಲ ನಾಮ, ರೂಪ, ಕರ್ಮ ಎಂಬ ಈ ಮೂರೇ ಆಗಿವೆಯೆಂದು ಈ ಅಧ್ಯಾಯದ ಕೊನೆಯ ಬ್ರಾಹ್ಮಣವು ಪ್ರಾರಂಭಿಸುತ್ತದೆ. ನಾಮ–ರೂಪ–ಕರ್ಮಗಳು ಒಂದಕ್ಕೊಂದು ಆಶ್ರಯವಾಗಿ, ಪರಸ್ಪರ ಅಭಿವ್ಯಕ್ತಿಗೆ ಕಾರಣವಾಗಿ, ಒಂದರಲ್ಲೊಂದು ಲಯವಾಗುವುದಾಗಿ ಅನ್ಯೋನ್ಯವಾಗಿ ಆಶ್ರಯಿಸಿರುವ ಮೂರು ಕೋಲುಗಳಂತೆ ಶರೀರಲ್ಲಿ ಕೂಡಿರುತ್ತವೆ, ಇವು ಪರಮಾತ್ಮನಿಗೆ ಉಪಾಧಿಗಳಾಗಿವೆ. ನಾಮ–ರೂಪ–ಕರ್ಮಗಳೆಂಬ ಅನಾತ್ಮದಿಂದ ಯಾರ ಮನಸ್ಸು ಹಿಂದಿರುಗದಿರುವುದೊ ಅವನಿಗೆ ಆತ್ಮಲೋಕದಲ್ಲಿ ಆಸಕ್ತಿಯಿರುವುದಿಲ್ಲ ; ಏಕೆಂದರೆ ಬಾಹ್ಯ–ಪ್ರವೃತ್ತಿಗೂ ಪ್ರತ್ಯಗಾತ್ಮ–ಪ್ರವೃತ್ತಿಗೂ ಅತ್ಯಂತ ವಿರೋಧವಿದೆ

## ಎರಡನೆಯ ಅಧ್ಯಾಯ

ಹಿಂದೆ ಅವಿದ್ಯಾವಿಷಯವಾದ ಸಂಸಾರತತ್ತ್ವವನ್ನು ತಿಳಿಸಿದ್ದಾಯಿತು ಇನ್ನು ವಿದ್ಯಾವಿಷಯವಾದ ಆತ್ಮತತ್ತ್ವವನ್ನು ಉಪದೇಶಿಸಲು ಪ್ರಾರಂಭವಾಗಿರುವ ಈ ಅಧ್ಯಾಯಕ್ಕೆ ಆರು ಬ್ರಾಹ್ಮಣಗಳಿವೆ. ಗಾರ್ಗ್ಯ–ಅಜಾತಶತ್ರುಗಳ ಸಂವಾದರೂಪವಲ್ಲಿರುವ ಮೊದಲನೆಯ ಬ್ರಾಹ್ಮಣವು ಒಂದು ಆಖ್ಯಾಯಿಕೆಯಿಂದ ಪ್ರಾರಂಭವಾಗುತ್ತದೆ. ಗರ್ಗಗೋತ್ರಕ್ಕೆ ಸೇರಿದ ದೃಪ್ತಬಾಲಾಕಿ ಎಂಬುವನು ಕಾಶೀರಾಜನಾದ ಅಜಾತಶತ್ರುವಿಗೆ ಬ್ರಹ್ಮವಿದ್ಯೆಯನ್ನು ಉಪ–ದೇಶಿಸಲು ಬಯಸಿದನು. ಇವನು ಅವಿದ್ಯಾವಿಷಯಕವಾದ ಸೋಪಾಧಿಕ–ಬ್ರಹ್ಮವನ್ನು ಮಾತ್ರ ಅರಿತಿದ್ದನು; ಎಂದರೆ ಆದಿತ್ಯ, ಚಂದ್ರ, ವಿದ್ಯುತ್ತು, ಆಕಾಶ, ವಾಯು, ಅಗ್ನಿ, ನೀರು, ಕನ್ನಡಿ, ಹೆಜ್ಜೆಯ ಶಬ್ದ, ದಿಕ್ಕುಗಳು, ಕತ್ತಲೆ, ಹಿರಣ್ಯಗರ್ಭ—ಇವರಲ್ಲಿರುವ ಪುರುಷನನ್ನೇ ಬ್ರಹ್ಮವೆಂದು ಅರಿ–ತಿದ್ದನು. ಆದರೆ ಇಂಥ ಮತಗಳಿಗೆ ವಿರುದ್ಧವಾದ ನಿರುಪಾಧಿಕ ಆತ್ಮತತ್ತ್ವವನ್ನು ಅಜಾತಶತ್ರುವು ಒಪ್ಪಿಕೊಂಡಿದ್ದನು. ಆದುದರಿಂದ ಇವನು ಬಾಲಾಕಿಗೆ ಅದನ್ನೇ ಉಪದೇಶಿಸಿದನು : ಗಾಢನಿದ್ರೆಯಲ್ಲಿ ವಾಗಾದಿ ಇಂದ್ರಿಯಗಳೆಲ್ಲ ಲಯವನ್ನು ಹೊಂದಿದಾಗ ಜೀವಾತ್ಮನು ಉಪಾಧಿಯಿಂದ ಆಗಿದ್ದ ವಿಶೇಷಾತ್ಮ

ರೂಪವನ್ನು ಬಿಟ್ಟು ನಿರ್ವಿಶೇಷನಾದ ಪರಮಾತ್ಮನಲ್ಲಿ ಮಲಗುತ್ತಾನೆ. ಏನನ್ನೂ ಅರಿಯಲಾಗದ ಆ ತನಿನಿದ್ರೆಯಲ್ಲಿ ಜೀವಾತ್ಮನು ಕುಮಾರ ನಂತೆ, ಮಹಾರಾಜನಂತೆ ಅಥವಾ ಪರಾಕಾಷ್ಠೆಯನ್ನು ಮುಟ್ಟಿರುವ ಮಹಾ ಬ್ರಾಹ್ಮಣನಂತೆ ಆಗುತ್ತಾನೆ. ಅಗ್ನಿಯಿಂದ ಸಣ್ಣ ಕಿಡಿಗಳು ಹಾರುವಂತೆ ಪರಮಾತ್ಮನಿಂದ ಎಲ್ಲ ಪ್ರಾಣಿಗಳೂ, ಎಲ್ಲ ಲೋಕಗಳೊ, ಎಲ್ಲ ದೇವತೆಗಳೂ, ಎಲ್ಲ ಪ್ರಾಣಿಗಳೂ ಬರುತ್ತವೆ. ಈ ಸಂದರ್ಭದಲ್ಲಿ ಭಾಷ್ಯಕಾರರು ತಮಗಿಂತ ಹಿಂದಿನವರೂ ಸಂಪ್ರದಾಯವಿದರೂ ಆದ ದ್ರಮಿಡಾಚಾರ್ಯರ ವ್ಯಾಧ-ಸಂವ-ರ್ಧಿತ-ರಾಜಪುತ್ರನ ಕಥೆಯನ್ನು ಹೀಗೆ ಉದಾಹರಿಸಿರುತ್ತಾರೆ: ಹುಟ್ಟಿದಂದಿ-ನಿಂದಲೇ ತಾಯಿತಂದೆಗಳಿಂದ ಪರಿತ್ಯಜಿಸಲ್ಪಟ್ಟು ರಾಜಪುತ್ರನೊಬ್ಬನು ವ್ಯಾಧರ ಮನೆಯಲ್ಲಿ ಬೆಳೆದನು. ತನ್ನ ವಂಶವನ್ನು ಅರಿಯದ ಈ ರಾಜ-ಪುತ್ರನು ವ್ಯಾಧನಂತೆಯೇ ಜೀವಿಸುತ್ತಿದ್ದನು. ಯಾವನೋ ಒಬ್ಬ ಪರಮ-ಕಾರುಣಿಕನಾದ ಮನುಷ್ಯನು ರಾಜಪುತ್ರನು ರಾಜಶ್ರೀಪ್ರಾಪ್ತಿಗೆ ಅರ್ಹ ನೆಂದು ಅರಿತು ಇವನ ನಿಜವಾದ ವಂಶವನ್ನು ಪ್ರಕಟಪಡಿಸಿದನು. ಆಗ ರಾಜಪುತ್ರನು ತಾನು ವ್ಯಾಧಜಾತಿಯವನೆಂಬ ಭಾವನೆಯನ್ನೂ ಆ ಜಾತಿಯ ಕರ್ಮಗಳನ್ನೂ ಬಿಟ್ಟು ತನ್ನ ಪಿತೃಪೈತಾಮಹರ ಕಾಲದಿಂದ ಬಂದ ಪದವಿ ಯನ್ನೇ ಅನುಸರಿಸಿದನು. ಹಾಗೆಯೇ ಜೀವನು ತನ್ನ ಪರಮಾತ್ಮ-ಸ್ವರೂಪ ವನ್ನು ಮರೆತುಕೊಂಡು ದೇಹೇಂದ್ರಿಯಗಳೆಂಬ ಕಾಡಿನಲ್ಲಿ ಪ್ರವೇಶಿಸಿ ಸಂಸಾರ-ಧರ್ಮವನ್ನು ಪಡೆದಿರುತ್ತಾನೆ. 'ನೀನು ಈ ಸ್ವರೂಪದವನಲ್ಲ, ಅಸಂಸಾರಿಯಾದ ಪರಬ್ರಹ್ಮವಾಗಿವೆ' ಎಂದು ಆಚಾರ್ಯನಿಂದ ಬೋಧಿತ-ನಾಗಿ ಏಷಣಾತ್ರಯದ ಅನುವೃತ್ತಿಯನ್ನು ಬಿಟ್ಟು 'ಬ್ರಹ್ಮೈವಾಸ್ಮಿ' ಎಂದು ಅರಿತುಕೊಳ್ಳುತ್ತಾನೆ.

ಹಿಂದೆ (೨, ೧, ೨೦) ಪ್ರಾಣಗಳು ಸತ್ಯ, ಪರಮಾತ್ಮನು ಅವುಗಳ ಸತ್ಯ ಎಂದು ತಿಳಿಸಿದೆ. 'ಸತ್ಯದ ಸತ್ಯ' ಎಂಬುದು ಪರಮಾತ್ಮನ ರಹಸ್ಯ-ನಾಮ. ಈಗ ಆ ಪ್ರಾಣಗಳು ಯಾವುವು ಎಂಬುದನ್ನೂ ಅವುಗಳ ರಹಸ್ಯ-ನಾಮಗಳನ್ನೂ ಎರಡನೆಯ ಬ್ರಾಹ್ಮಣದಲ್ಲಿ ತಿಳಿಸಿದೆ: ಈ ಶರೀರಮಧ್ಯದಲ್ಲಿರುವ ಪ್ರಾಣವೇ ಕರುವು; ಈ ಶರೀರವು ಅದರ ವಾಸಸ್ಥಾನ, ತಲೆಯು ಅದರ ವಿಶೇಷಸ್ಥಾನ, ಅನ್ನಪಾನಾದಿಗಳಿಂದ ಉಂಟಾಪ ಶಕ್ತಿಯು ಅದರ ಗೂಟ,

ಅನ್ನವು ಅದರ ಹಗ್ಗ. ಈ ಪ್ರಾಣವನ್ನು ಅಕ್ಷಯಕ್ಕೆ ಕಾರಣವಾಗಿರುವ ಏಳು ದೇವತೆಗಳು ಸ್ತುತಿಸುತ್ತಿರುವರೆಂದು ಉಪಾಸಿಸಬೇಕು

ಮೂರನೆಯ ಬ್ರಾಹ್ಮಣವು ಬ್ರಹ್ಮದ ಎರಡು ರೂಪಗಳನ್ನು ನಿರೂಪಿಸುತ್ತದೆ. ಒಂದು ರೂಪವು ಮೂರ್ತವೂ ಮರ್ತ್ಯವೂ ಪರಿಚ್ಛಿನ್ನವೂ ಅಸಾಧಾರಣಧರ್ಮವುಳ್ಳದ್ದೂ ಆಗಿದ್ದರೆ ಇನ್ನೊಂದು ಅಮೂರ್ತವೂ ಅಮೃತವೂ ಅಪರಿಚ್ಛಿನ್ನವೂ ಪರೋಕ್ಷವಾಗಿ ಹೇಳುವುದಕ್ಕೆ ಯೋಗ್ಯವೂ ಆಗಿದೆ. ಇವೆರಡು ರೂಪಗಳನ್ನು ಅವಿದ್ಯೆಯಿಂದ ಅಪರೂಪವಾದ ಪರಬ್ರಹ್ಮದಲ್ಲಿ ಅಧ್ಯಾರೋಪಿಸಿರುವುದರಿಂದ ಅದು ನಿರೂಪಣೆಗೆ ಒಳಪಟ್ಟಿದೆ. ಪೃಥ್ವಿ, ನೀರು, ಅಗ್ನಿ ಇವುಗಳಿಂದ ಮೂರ್ತವೂ ವಾಯ್ವಾಕಾಶಗಳಿಂದ ಅಮೂರ್ತವೂ ಆಗಿದೆ. 'ನೇತಿ, ನೇತಿ' ಎಂಬ ಪದಗಳು ಮೂರ್ತಾಮೂರ್ತಗಳಲ್ಲದೆ ಸಮಸ್ತ ವಿಶೇಷಗಳನ್ನೂ ನಿಷೇಧಿಸಿ ಬ್ರಹ್ಮದ ಸ್ವರೂಪವನ್ನು ನಿರೂಪಿಸುತ್ತವೆ.

ಆತ್ಮಜ್ಞಾನಕ್ಕೆ ಅಂಗವಾಗಿ ಸಂನ್ಯಾಸವನ್ನು ವಿಧಿಸಲು ನಾಲ್ಕನೆಯ ಬ್ರಾಹ್ಮಣವು ಒಂದು ಆಖ್ಯಾಯಿಕೆಯನ್ನು ಹೇಳುತ್ತದೆ: ಬ್ರಹ್ಮಜ್ಞನಾದ ಯಾಜ್ಞವಲ್ಕ್ಯನಿಗೆ ಮೈತ್ರೇಯೀ ಕಾತ್ಯಾಯನೀ ಎಂಬ ಇಬ್ಬರು ಪತ್ನಿಯರಿದ್ದರು ಅತ್ಯಾಶ್ರಮವನ್ನು ಸ್ವೀಕರಿಸಲು ಸಿದ್ಧನಾದ ಯಾಜ್ಞವಲ್ಕ್ಯನು ಹೊರಡುವುದಕ್ಕೆ ಮೊದಲು ತನ್ನ ಸ್ವತ್ತನ್ನು ಪತ್ನಿಯರಿಬ್ಬರಿಗೂ ಹಂಚಲು ಇಷ್ಟಪಟ್ಟನು. ಆಗ ಮೈತ್ರೇಯಿಯು 'ಧನಪರಿಪೂರ್ಣವಾದ ಈ ಪೃಥ್ವಿಯೆಲ್ಲ ನನಗಿದ್ದರೆ ನಾನು ಅದರ ಮೂಲಕ ಅಮೃತಳಾಗುವೆನೆ?' ಎಂದು ಅವನನ್ನು ಪ್ರಶ್ನಿಸಿದಳು. ಯಾಜ್ಞವಲ್ಕ್ಯನು ಧನಸಾಧ್ಯವಾದ ಅಗ್ನಿಹೋತ್ರಾದಿಕರ್ಮಗಳಿಂದ ಅಮೃತತ್ವದ ಆಶೆಯೇ ಇಲ್ಲವೆಂದು ಹೇಳಿದನು. ಆಗ ಮೈತ್ರೇಯಿಯು ಧನವನ್ನು ನಿರಾಕರಿಸಿ ತನಗೆ ಅಮೃತತ್ತ್ವಸಾಧನವನ್ನು ಉಪದೇಶಿಸಬೇಕೆಂದು ಪತಿಯನ್ನು ಬೇಡಿಕೊಂಡಳು. ಯಾಜ್ಞವಲ್ಕ್ಯನು ಅಮೃತತ್ತ್ವ-ಪ್ರಾಪ್ತಿಗೆ ಆತ್ಮಜ್ಞಾನವೊಂದೇ ಮುಖ್ಯಸಾಧನವೆಂದು ಉಪದೇಶಿಸಿ ಆತ್ಮನ ವೈಭವವನ್ನು ವಿವರಿಸುತ್ತಾನೆ. ಪತಿ, ಪತ್ನಿ, ಮಕ್ಕಳು, ಧನ, ಬ್ರಾಹ್ಮಣ, ಕ್ಷತ್ರಿಯ, ಲೋಕಗಳು, ದೇವತೆಗಳು, ಪ್ರಾಣಿಗಳು, ಸರ್ವವೂ—ಇವುಗಳು ತಮ್ಮ ಪ್ರಯೋಜನಕ್ಕಾಗಿ ತಾವು ಪ್ರಿಯವಾಗಿಲ್ಲ, ಆತ್ಮನ ಪ್ರಯೋಜನಕ್ಕಾಗಿ ಪ್ರಿಯವಾಗಿರುತ್ತವೆ. ಆದುದರಿಂದ ಆತ್ಮಪ್ರೀತಿಯು ಮುಖ್ಯವೆಂದೂ ಆತ್ಮ-

ಪ್ರೀತಿಗೆ ಸಾಧನವಾಗಿರುವ ಇತರ ವಸ್ತುಗಳಲ್ಲಿರುವ ಪ್ರೀತಿಯು ಗೌಣವೆಂದೂ ಅರಿಯಬೇಕು ಆತ್ಮನನ್ನೇ ಶ್ರವಣದಿಂದ ಮನನದಿಂದ ನಿಧಿಧ್ಯಾಸನದಿಂದ ಸಾಕ್ಷಾತ್ಕರಿಸಬೇಕು ಯಾವನು ಬ್ರಾಹ್ಮಣ-ಕ್ಷತ್ರಿಯ-ಲೋಕ-ದೇವತಾದಿ ಗಳನ್ನು ಆತ್ಮನಿಗಿಂತ ಬೇರೆಯೆಂದು ಅರಿಯುತ್ತಾನೆಯೋ ಅವನನ್ನು ಬ್ರಾಹ್ಮ-ಣಾದಿಗಳು ನಿರಾಕರಿಸುತ್ತಾರೆ; ಏಕೆಂದರೆ ಇವರೆಲ್ಲ ಇವನ ಆತ್ಮನೇ ಆಗಿರು ತ್ತಾರೆ. ದುಂದುಭಿ. ಶಂಖ, ವೀಣೆ ಇವುಗಳ ವಿಶೇಷಶಬ್ದಗಳನ್ನು ಶಬ್ದ-ಸಾಮಾನ್ಯದಿಂದ ಭಿನ್ನವಾಗಿ ಗ್ರಹಿಸಲಾಗದಂತೆ ಯಾವ ವಿಶೇಷವನ್ನೂ ಪ್ರಜ್ಞಾನಘನವಾದ ಬ್ರಹ್ಮದಿಂದ ಭಿನ್ನವಾಗಿ ಅರಿತುಕೊಳ್ಳಲು ಸಾಧ್ಯವಿಲ್ಲ. ಹಸಿಸೌದೆಯಿರುವ ಬೆಂಕಿಯಿಂದ ಬಗೆಬಗೆಯ ಹೊಗೆಯು ಹೊರಬರುವಂತೆ ವೇದಗಳೆಲ್ಲ ಮಹತ್ ಪರಮಾರ್ಥದಿಂದ ಹೊರಟುಬಂದಿವೆ ಉಪ್ಪು ಕರಗಿ ರುವ ನೀರಿನಲೆಲ್ಲ ಉಪ್ಪಿನ ರುಚಿಯೇ ಇರುವಂತೆ ಅನಂತವೂ ಅಪಾರವೂ ಆದ ಮಹತ್ ಪರಮಾರ್ಥವೂ ವಿಜ್ಞಾನಘನವಾಗಿದೆ ಪರಮಾರ್ಥದಲ್ಲಿ ವಿಶೇಷಜ್ಞಾನವಿರುವಂತೆ ಕಂಡುಬಂದರೆ ಅದಕ್ಕೆ ಉಪಾಧಿಯ ಸಂಬಂಧವೇ ಕಾರಣ ಅವಿದ್ಯಾರೋಪಿತವಾದ ಭಿನ್ನಜ್ಞಾನವು, ನಾಶವಾದರೆ, ವಿಶೇಷ-ಜ್ಞಾನವೂ ನಾಶವಾಗಿ ವಿಜ್ಞಾನಘನವಾದ ಬ್ರಹ್ಮಸ್ವರೂಪವು ವ್ಯಕ್ತವಾಗುತ್ತದೆ. ಎಲ್ಲಿ ದ್ವೈತವಿದೆಯೊ ಅಲ್ಲಿ ಮನುಷ್ಯನು ನೋಡುತ್ತಾನೆ, ಕೇಳುತ್ತಾನೆ, ಮಾಡುತ್ತಾನೆ ಅಥವಾ ಆತ್ಮನಿಗಿಂತ ಬೇರೆ ವಸ್ತುವಿರುವಂತೆ ಭಾವಿಸುತ್ತಾನೆ; ಆದರೆ ಆತ್ಮಜ್ಞಾನಿಗೆ ಕರಣ-ಕ್ರಿಯಾ-ಕಾರಕಗಳಾಗಲೀ ಜ್ಞಾತೃ-ಜ್ಞೇಯ-ಜ್ಞಾನಗಳಾಗಲೀ ಇರುವುದಿಲ್ಲ.

ಐದನೆಯ ಬ್ರಾಹ್ಮಣವು ಮೊದಲನೆಯ ಮತ್ತು ಎರಡನೆಯ ಅಧ್ಯಾಯ ಗಳ ಅರ್ಥವನ್ನು ಸಂಗ್ರಹಿಸಿ ಹೇಳುತ್ತದೆ. ಜಗತ್ತೆಲ್ಲವೂ ಒಂದಕ್ಕೊಂದು ಉಪಕಾರ್ಯ-ಉಪಕಾರಕವಾಗಿರುವುದರಿಂದ ಆತ್ಮನಿಂದಲೇ ಹುಟ್ಟಿ ಆತ್ಮ ನನ್ನೇ ಸಾಮಾನ್ಯವಾಗಿ ಹೊಂದಿ ಆತ್ಮನಲ್ಲಿಯೇ ಲಯವನ್ನು ಪಡೆಯುತ್ತದೆ ಪರಮಾತ್ಮನು ಪ್ರಾಣಿಗಳಿಗೆಲ್ಲ ಅಧಿಪತಿಯು ಮತ್ತು ರಾಜನು. ಹೇಗೆ ಅರೆ-ಕಾಲುಗಳು ಚಕ್ರನಾಭಿಯಲ್ಲಿ ಮತ್ತು ಹೊರವಲಯದಲ್ಲಿ ನಿಲ್ಲಿಸಲ್ಪಟ್ಟಿವೆಯೊ ಹಾಗೆಯೇ ಪರಮಾತ್ಮನಲ್ಲಿ ಎಲ್ಲ ಪ್ರಾಣಿಗಳೂ ಎಲ್ಲ ದೇವತೆಗಳೂ ಎಲ್ಲ ಲೋಕಗಳೂ ಎಲ್ಲ ಜೀವಾತ್ಮರೂ ಸಮರ್ಪಿತರಾಗಿರುವರು. ದಧ್ಯಙ್

ಆಥರ್ವಣನು ಹಯಶಿರಸ್ಸಿನ ಮೂಲಕ ಇಬ್ಬರು ಅಶ್ವಿನಿದೇವತೆಗಳಿಗೆ ಆತ್ಮ-ವಿದ್ಯೆಯನ್ನು ಹೇಗೆ ಉಪದೇಶಿಸಿದನೆಂದು ಇಲ್ಲಿ ಹೇಳಿದೆ. ಪರಮಾತ್ಮನು ಅದ್ವಯನಾಗಿದ್ದರೂ ಮಾಯೆಯಿಂದ ಬಹುರೂಪನಾಗಿ ಕಾಣುತ್ತಾನೆ. ಜೀವ-ತತ್ತ್ವವೇ ಅಪೂರ್ವವೂ ಅನಪರವೂ ಅನಂತರವೂ ಅಬಾಹ್ಯವೂ ಆದ ಬ್ರಹ್ಮವು ಎಂಬುದು ಈ ಪ್ರಕರಣದ ಮತ್ತು ಎಲ್ಲ ಉಪನಿಷತ್ತುಗಳ ತಾತ್ಪರ್ಯ.

ಈ ಅಧ್ಯಾಯದ ಕೊನೆಯ ಖಂಡಕ್ಕೆ ವಂಶಬ್ರಾಹ್ಮಣವೆಂದು ಹೆಸರು. ಬ್ರಹ್ಮವಿದ್ಯೆಗಾಗಿ ಪ್ರವೃತ್ತವಾಗಿರುವ ಮಧುಕಾಂಡದ ಆಚಾರ್ಯವಂಶವನ್ನು ಬ್ರಹ್ಮವಿದ್ಯಾಸ್ತುತಿಗಾಗಿ ಇಲ್ಲಿ ಹೇಳಿದೆ ಆಚಾರ್ಯವಂಶವು ಹಿರಣ್ಯಗರ್ಭ-ನಿಂದಲೇ ಪ್ರಾರಂಭವಾಗಿರುತ್ತದೆ.

## ಮೂರನೆಯ ಅಧ್ಯಾಯ

ಮಧುಕಾಂಡವು ಆಗಮಪ್ರಧಾನವಾಗಿದ್ದರೆ ಯಾಜ್ಞವಲ್ಕೀಯಕಾಂಡವು ಯುಕ್ತಿಪ್ರಧಾನವಾಗಿದೆ. ಆಗಮಾರ್ಥವನ್ನು ಇಲ್ಲಿ ಪರೀಕ್ಷಾಪೂರ್ವಕವಾಗಿ ನಿರ್ಧರಿಸಿದೆ. ಆಗಮ–ಯುಕ್ತಿಗಳೆರಡೂ ಆತ್ಮೈಕತ್ವವನ್ನು ತಿಳಿಸಿಕೊಡಲು ಸಮರ್ಥವಾಗಿವೆ. ಈ ಕಾಂಡದಲ್ಲಿ ಬರುವ ಆಖ್ಯಾಯಿಕೆಯು ಜ್ಞಾನಸ್ತುತಿಗಾಗಿ ಅಥವಾ ಜ್ಞಾನಪ್ರಾಪ್ತಿಗೆ ಸಾಧನವಾಗಿರುವ ದಾನವನ್ನು ತಿಳಿಸಲು ಬಂದಿದೆ. ಮೂರನೆಯ ಅಧ್ಯಾಯಕ್ಕೆ ಒಂಬತ್ತು ಬ್ರಾಹ್ಮಣಗಳಿವೆ. ಮೊದಲ-ನೆಯದಾದ ಅಶ್ವಲಬ್ರಾಹ್ಮಣವು ತಿಳಿದವರೊಂದಿಗೆ ವಾದಿಸುವುದು ಜ್ಞಾನ-ಪ್ರಾಪ್ತಿಗೆ ಉಪಾಯವೆಂಬುದನ್ನು ಸೂಚಿಸುತ್ತದೆ. ಜನಕ ವೈದೇಹನು ಬಹುದಕ್ಷಿಣವೆಂಬ ಯಾಗವನ್ನು ಮಾಡಿದನು. ಅಲ್ಲಿಗೆ ಕುರು–ಪಾಂಚಾಲ ದೇಶಗಳ ಬ್ರಾಹ್ಮಣರು ಬಂದಿದ್ದರು. ಇವರಲ್ಲಿ ಬ್ರಹ್ಮಿಷ್ಠನು ಯಾರೆಂದು ಅರಿತುಕೊಳ್ಳುವ ಇಚ್ಛೆ ಜನಕನಿಗೆ ಉಂಟಾಯಿತು. ಅವನು ಒಂದು ಸಾವಿರ ಗೋವುಗಳನ್ನು ದೊಡ್ಡಿಯಲ್ಲಿ ನಿಲ್ಲಿಸಿ ಪ್ರತಿಯೊಂದು ಗೋವಿನ ಕೊಂಬುಗಳಿಗೂ ಹತ್ತು ಹತ್ತು ಚಿನ್ನದ ಪಾದಗಳನ್ನು ಕಟ್ಟಿಸಿ, ಅವುಗಳನ್ನೆಲ್ಲ ಬ್ರಹ್ಮಿಷ್ಠ-ನಾದವನು ತೆಗೆದುಕೊಂಡು ಹೋಗಬಹುದೆಂದು ಹೇಳಿದನು. ಅಲ್ಲಿದ್ದ ಯಾಜ್ಞವಲ್ಕ್ಯನು ಗೋವುಗಳನ್ನು ಮನೆಗೆ ಅಟ್ಟಿಕೊಂಡು ಹೋಗಬೇಕೆಂದು ತನ್ನ ಶಿಷ್ಯನಾದ ಸಾಮಶ್ರವನಿಗೆ ಆಜ್ಞಾಪಿಸಿದನು. ಈ ಅದ್ಭುತವಾದ ದೃಶ್ಯ

ವನ್ನು ನೋಡಿದ ಬ್ರಾಹ್ಮಣರೆಲ್ಲರೂ ಕೋಪಗೊಂಡು ಯಾಜ್ಞವಲ್ಕ್ಯನ ಮೇಲೆ ಪ್ರಶ್ನೆಗಳನ್ನು ಮಳೆಗರೆದರು. ಅಶ್ವಲನೆಂಬುವನು ಮೊದಲು ಮುಂದೆ ಬಂದು ಎಂಟು ಪ್ರಶ್ನೆಗಳನ್ನು ಹಾಕಿದನು. ಯಾಜ್ಞವಲ್ಕ್ಯನು ಪ್ರಶ್ನೆಗಳಿಗೆಲ್ಲ ಶೀಘ್ರವಾಗಿಯೂ ಸಮರ್ಪಕವಾಗಿಯೂ ಉತ್ತರಕೊಟ್ಟನು. ಅಶ್ವಲನು ತನ್ನ ಎದುರಾಳಿಯ ಪ್ರತಿಭೆಯನ್ನು ಅರಿತುಕೊಂಡು ಮೌನವನ್ನು ಅವಲಂಬಿಸಿದನು.

ಎರಡನೆಯ ಬ್ರಾಹ್ಮಣದಲ್ಲಿ ಜಾರತ್ಕಾರವ ಆರ್ತಭಾಗನು ಯಾಜ್ಞ-ವಲ್ಕ್ಯನಿಗೆ ಆರು ಪ್ರಶ್ನೆಗಳನ್ನು ಹಾಕಿ ಅವುಗಳಿಗೆ ಉತ್ತರವನ್ನು ಪಡೆಯುತ್ತಾನೆ. ಆರನೆಯ ಪ್ರಶ್ನೆಯು ಸ್ವಾರಸ್ಯವುಳ್ಳದ್ದಾಗಿದೆ : ಸಮ್ಯಗ್ದರ್ಶಿಯಲ್ಲದ ಮನುಷ್ಯನು ಮೃತನಾದ ಮೇಲೆ ಎಲ್ಲಿಗೆ ಹೋಗುತ್ತಾನೆ ? ಯಾಜ್ಞವಲ್ಕ್ಯನು ಇದು ಜನಸಂದಣಿಯಲ್ಲಿ ನಿರ್ಣಯಿಸಬಹುದಾದ ಪ್ರಶ್ನೆಯಲ್ಲವೆಂದೂ ಏಕಾಂತದಲ್ಲಿ ನಿರ್ಣಯಿಸಬೇಕೆಂದೂ ಹೇಳುತ್ತಾನೆ. ಅನಂತರ ಅವರಿಬ್ಬರೂ ಒಂದು ನಿರ್ಜನಪ್ರದೇಶಕ್ಕೆ ಹೋಗಿ ವಿಷಯವನ್ನು ಚರ್ಚಿಸಿ ಕರ್ಮವೊಂದೇ ಮನುಷ್ಯನ ಪೂರ್ವಜನ್ಮಕ್ಕೆ ಮುಖ್ಯಕಾರಣವೆಂದು ತೀರ್ಮಾನಿಸುತ್ತಾರೆ. ಆದುದರಿಂದ ಮನುಷ್ಯನು ಪುಣ್ಯಕರ್ಮದಿಂದ ಪುಣ್ಯನಾಗುತ್ತಾನೆ, ಪಾಪಕರ್ಮ-ದಿಂದ ಪಾಪಿಯಾಗುತ್ತಾನೆ. ಆಗ ಆರ್ತಭಾಗನು ಸುಮ್ಮನಾಗುತ್ತಾನೆ.

ಮೂರನೆಯದಕ್ಕೆ ಭುಜ್ಯಬ್ರಾಹ್ಮಣವೆಂದು ಹೆಸರು. ಕರ್ಮಫಲವು ಎಷ್ಟೇ ಒಳ್ಳೆಯದಾಗಿದ್ದರೂ ಸಂಸಾರದಲ್ಲಿಯೇ ಅಂತರ್ಗತವಾಗಿದೆ ಮತ್ತು ಉಪಾಸನಾಸಹಿತವಾದ ಕರ್ಮವು ಮೋಕ್ಷಪ್ರದವಲ್ಲ ಎಂಬುದನ್ನು ಪ್ರದರ್ಶಿಸಲು ಈ ಬ್ರಾಹ್ಮಣವು ಬಂದಿದೆ.

ನಾಲ್ಕನೆಯದಕ್ಕೆ ಉಷಸ್ತಬ್ರಾಹ್ಮಣವೆಂದು ಹೆಸರು. ವಿಷಯೇಂದ್ರಿಯಗಳಿಂದ ಗ್ರಸ್ತನಾಗಿ ಸಂಚರಿಸುವ ಆತ್ಮನು ಇದ್ದಾನೆಯೋ ಅಥವಾ ಇಲ್ಲವೋ? ಇರುವುದಾದರೆ ಅವನ ಸ್ವರೂಪವೇನು ? ಆತ್ಮನನ್ನು ವಿಂಗಡಿಸಿ ಅರಿತುಕೊಳ್ಳಲು ಉಷಸ್ತಪ್ರಶ್ನೆಯು ಪ್ರಾರಂಭವಾಗಿದೆ. ಸಾಕ್ಷಾತ್ತಾಗಿ ಅಪ-ರೋಕ್ಷವಾಗಿ ಇರುವ ಬ್ರಹ್ಮವನ್ನು—ಸರ್ವಾಂತರ್ವರ್ತಿಯಾದ ಆತ್ಮನನ್ನು—ತನಗೆ ಸರಿಯಾಗಿ ತಿಳಿಸಬೇಕೆಂದು ಉಷಸ್ತಚಾಕ್ರಾಯಣನು ಪ್ರಶ್ನಿಸುತ್ತಾನೆ. ಯಾಜ್ಞವಲ್ಕ್ಯನು ಉತ್ತರ ಕೊಡುತ್ತಾನೆ : ಅದು ಪ್ರಾಣಾಪಾನವ್ಯಾನಗಳ

ಮೂಲಕ ಶರೀರದಲ್ಲಿ ಕೆಲಸ ಮಾಡುತ್ತದೆ. ಇದು ದ್ರಷ್ಟೃವೂ ಶ್ರೋತೃವೂ ಮಂತೃವೂ ಜ್ಞಾತೃವೂ ಆಗಿರುವುದರಿಂದ ಇದನ್ನು, ವಿಷಯವಸ್ತುವಿನಂತೆ, ಸಾಕ್ಷಾತ್ತಾಗಿ ನೋಡಲು ಕೇಳಲು ಭಾವಿಸಲು ಅಥವಾ ಅರಿತುಕೊಳ್ಳಲು ಸಾಧ್ಯವಿಲ್ಲ.

ಐದನೆಯದು ಕಹೋಲಬ್ರಾಹ್ಮಣವೆಂದು ಪ್ರಸಿದ್ಧವಾಗಿದೆ. ಹಿಂದಿನ ಪ್ರಶ್ನೆಗೆ ಉತ್ತರವಾಗಿ ಆತ್ಮನು ಶರೀರಾದಿಗಳಿಗಿಂತ ಭಿನ್ನವೆಂದು ಹೇಳಿದ್ದಾಯಿತು. ಇಲ್ಲಿ ಪ್ರಶ್ನೆಯು ಹಿಂದಿನಂತೆಯೇ ಇದ್ದರೂ ಅರಿತುಕೊಳ್ಳಬೇಕಾದ ವಿಷಯವು ಬೇರೆ. ಬಂಧನದಿಂದ ಮೋಕ್ಷಹೊಂದುವುದಕ್ಕೆ ಸಾಧನವಾದ ಸಂನ್ಯಾಸಸಹಿತವಾದ ಆತ್ಮಜ್ಞಾನವನ್ನು ಇಲ್ಲಿ ಹೇಳಿದೆ. ಆತ್ಮನು ಹಸಿವು ಬಾಯಾರಿಕೆಗಳನ್ನೂ ಶೋಕ-ಮೋಹಗಳನ್ನೂ ಮುಪ್ಪು-ಮರಣಗಳನ್ನೂ ದಾಟಿರುತ್ತಾನೆ: ಇಂಥ ಆತ್ಮನನ್ನು ಅರಿತುಕೊಂಡು ಬ್ರಾಹ್ಮಣರು ಪುತ್ರ-ವಿತ್ತ-ಲೋಕಗಳಲ್ಲಿರುವ ಆಶೆಯನ್ನು ಬಿಟ್ಟು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ. ಬ್ರಹ್ಮಜ್ಞಾನಿಯು ಹೇಗೆ ಆಚರಿಸಿದರೂ ಬ್ರಹ್ಮಜ್ಞಾನಿಯೇ. ಬ್ರಹ್ಮನಿಷ್ಠೆಗೆ ನಾಶವಿಲ್ಲ. ಇದು ಯಾಜ್ಞವಲ್ಕ್ಯನ ಸಿದ್ಧಾಂತ.

ಆರನೆಯದಕ್ಕೆ ಗಾರ್ಗೀಬ್ರಾಹ್ಮಣವೆಂದು ಹೆಸರು. ಪಂಚಭೂತಗಳ ಮತ್ತು ವಿವಿಧಲೋಕಗಳ ಸೂಕ್ಷ್ಮ-ಸೂಕ್ಷ್ಮತರ-ತಾರತಮ್ಯವನ್ನು ಗಾರ್ಗಿಯು ಪ್ರಶ್ನಿಸುತ್ತಾಳೆ. ಕೊನೆಗೆ ಬ್ರಹ್ಮಲೋಕವು ಯಾವುದರಿಂದ ವ್ಯಾಪ್ತವಾಗಿದೆಯೆಂದು ಗಾರ್ಗಿಯು ಕೇಳಲು, ಪ್ರಶ್ನೆಯ ವಿಷಯವನ್ನು ಮೀರಿರುವ ದೇವತೆಯನ್ನು ಕುರಿತು ಪ್ರಶ್ನೆಮಾಡಕೂಡದೆಂದು ಯಾಜ್ಞವಲ್ಕ್ಯನು ಹೇಳುತ್ತಾನೆ; ಏಕೆಂದರೆ ಬ್ರಹ್ಮಸ್ವರೂಪವನ್ನು ಅನುಮಾನ ಪ್ರಮಾಣದಿಂದ ಅರಿಯಲಾಗುವುದಿಲ್ಲ. ಶಾಸ್ತ್ರಾಚಾರ್ಯರಿಂದಲೇ ಅರಿತುಕೊಳ್ಳಬೇಕು.

ಬ್ರಹ್ಮಲೋಕದ ಅಂತರತಮವಾದ ಸೂತ್ರವನ್ನು ಹೇಳಲು ಏಳನೆಯದಾದ ಅಂತರ್ಯಾಮಿಬ್ರಾಹ್ಮಣವು ಪ್ರಾರಂಭವಾಗಿದೆ. ಯಾವುದರಿಂದ ಇಹ-ಪರಲೋಕಗಳೂ ಎಲ್ಲ ಪ್ರಾಣಿಗಳೂ ಪೋಣಿಸಲ್ಪಟ್ಟಿವೆಯೊ ಆ ಸೂತ್ರವು ಯಾವುದು ? ಯಾವನು ಒಳಗಿದ್ದುಕೊಂಡು ಇಹ-ಪರಲೋಕಗಳನ್ನೂ ಸರ್ವಪ್ರಾಣಿಗಳನ್ನೂ ನಿಯಮಿಸುತ್ತಾನೆಯೊ ಆ ಅಂತರ್ಯಾಮಿಯು ಯಾರು ?

ಇದು ಉದ್ದಾಲಕ ಆರುಣಿಯ ಪ್ರಶ್ನೆ. ಯಾಜ್ಞವಲ್ಕ್ಯನು ಉತ್ತರ ಕೊಡು ತ್ತಾನೆ : ವಾಯುವೇ ಆ ಸೂತ್ರವು. ಯಾವನು ಪೃಥ್ವಿ, ನೀರು, ಅಗ್ನಿ, ಅಂತ-ರಿಕ್ಷ, ವಾಯು, ದ್ಯುಲೋಕ, ಆದಿತ್ಯ, ದಿಕ್ಕುಗಳು, ಚಂದ್ರ-ನಕ್ಷತ್ರಗಳು, ಆಕಾಶ, ತಮಸ್ಸು, ತೇಜಸ್ಸು, ಸರ್ವಪ್ರಾಣಿಗಳು, ವಾಗಾದಿ ಇಂದ್ರಿಯಗಳು, ಮನಸ್ಸು, ಬುದ್ಧಿ, ರೇತಸ್ಸು—ಇವುಗಳ ಒಳಗಿದ್ದುಕೊಂಡು ನಿಯಮಿಸು ವನೊ ಅವನೇ ಅಂತರ್ಯಾಮಿ. ಅಂತರ್ಯಾಮಿಯು ಈ ಭೂತಭೌತಿಕ ವಸ್ತುಗಳ ಒಳಗಿದ್ದುಕೊಂಡು ಒಳಗಿನಿಂದ ನಿಯಮಿಸುತ್ತಿದ್ದರೂ ಇವುಗಳ ಆತ್ಮನಾಗಿದ್ದರೂ ಇವನ ಶರೀರವಾದ ಈ ವಸ್ತುಗಳು ಇವನನ್ನು ಅರಿಯವು. ಇವನು ಸಾಕ್ಷಿ. ಆದರೆ ಇವನನ್ನು ನೋಡಲಾಗುವುದಿಲ್ಲ. ಇವನು ಶ್ರೋತೃ, ಆದರೆ ಇವನನ್ನು ಕೇಳಲಾಗುವುದಿಲ್ಲ; ಇವನು ಮಂತೃ, ಆದರೆ ಇವನು ಮನಸ್ಸಿಗೆ ವಿಷಯನಲ್ಲ, ಇವನು ಜ್ಞಾತೃ, ಆದರೆ ಇವನನ್ನು ತಿಳಿಯಲಾಗುವು ದಿಲ್ಲ. ಇವನಿಗಿಂತ ಬೇರೆಯಾದ ಸಾಕ್ಷಿಯಾಗಲಿ ಶ್ರೋತೃವಾಗಲಿ ಮಂತೃ ವಾಗಲಿ ಜ್ಞಾತೃವಾಗಲಿ ಇಲ್ಲ. ಇವನೇ ಎಲ್ಲರ ಅಮೃತನಾದ ಆತ್ಮನು, ಇವನಿಗಿಂತ ಭಿನ್ನವಾದುದೆಲ್ಲ ನಶ್ವರವು.

ಅಶನಾಯಾದಿಗಳಿಂದ ನಿರ್ಮುಕ್ತವೂ ನಿರುಪಾಧಿಕವೂ ಸಾಕ್ಷಾದ ಪರೋಕ್ಷವೂ ಸರ್ವಾಂತರವೂ ಆದ ಬ್ರಹ್ಮವನ್ನು ಉಪದೇಶಿಸಲು ಎಂಟನೆಯ ಬ್ರಾಹ್ಮಣವು ಪ್ರಾರಂಭವಾಗಿದೆ. ಗಾರ್ಗಿಯು ಪುನಃ ಎರಡು ಪ್ರಶ್ನೆಗಳನ್ನು ಹಾಕುತ್ತಾಳೆ 'ಯಾವುದು ದ್ಯುಲೋಕದ ಮೇಲೆ ಪೃಥ್ವಿಯ ಕೆಳಗೆ ಇರುವುದೊ, ಯಾವುದು ದ್ಯುಲೋಕ-ಪೃಥ್ವಿಗಳಾಗಿದೆಯೊ ಮತ್ತು ಅವುಗಳ ನಡುವೆ ಇರುವುದೊ, ಯಾವುದನ್ನು ಭೂತ-ಭವಿಷ್ಯತ್-ವರ್ತಮಾನಗಳೆಂದು ಹೇಳುತ್ತಾರೆಯೊ ಆ ಸೂತ್ರವು ಯಾವುದರಿಂದ ವ್ಯಾಪ್ತವಾಗಿದೆ ?" ಇದು ಮೊದಲನೆಯ ಪ್ರಶ್ನೆ. ವ್ಯಕ್ತವಾದ ಜಗತ್ತಿಗೆ ಸೂತ್ರವೆಂದು ಹೆಸರು. ಇದು ಅವ್ಯಕ್ತವಾದ ಆಕಾಶದಿಂದ ವ್ಯಾಪ್ತವಾಗಿದೆಯೆಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ಅವ್ಯಕ್ತವಾದ ಆಕಾಶವು ಯಾವುದರಿಂದ ವ್ಯಾಪ್ತವಾಗಿದೆ ಯೆಂದು ಗಾರ್ಗಿಯು ಕೇಳಲು ಯಾಜ್ಞವಲ್ಕ್ಯನು ಉತ್ತರಕೊಡುತ್ತಾನೆ. ಅದನ್ನು ಅಕ್ಷರವೆಂದು ಬ್ರಾಹ್ಮಣರು ಹೇಳುತ್ತಾರೆ. ಅದು ಅಸ್ಥೂಲ, ಅನಣು, ಅಹ್ರಸ್ವ, ಅದೀರ್ಘ ಇತ್ಯಾದಿ. ಅದಕ್ಕೆ ಇಂದ್ರಿಯಗಳಾಗಲೀ

ಪ್ರಾಣಗಳಾಗಲಿ ಇಲ್ಲ. ಅದಕ್ಕೆ ಒಳಗಿಲ್ಲ ಮತ್ತು ಹೊರಗಿಲ್ಲ. ಅದು ಯಾವುದನ್ನೂ ತಿನ್ನುವುದಿಲ್ಲ, ಅದನ್ನು ಯಾವುದೂ ತಿನ್ನುವುದಿಲ್ಲ. ಈ ಅಕ್ಷರದ ಶಾಸನದಿಂದಲೇ ಸೂರ್ಯಚಂದ್ರರು ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ. ದ್ಯುಲೋಕಪೃಥ್ವಿಗಳೂ ನಿಮಿಷಮುಹೂರ್ತಾದಿ ಕಾಲಾವಯವಗಳೂ ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ ಮತ್ತು ನದಿಗಳೂ ಆಯಾ ದಿಕ್ಕುಗಳಲ್ಲಿಯೇ ಹರಿಯುತ್ತಿರುತ್ತವೆ ಈ ಅಕ್ಷರವನ್ನು ತಿಳಿದುಕೊಳ್ಳದೆ ಅನೇಕ ಸಹಸ್ರ ವರ್ಷಗಳ ವರೆಗೆ ಹೋಮ-ಯಾಗ-ತಪಸ್ಸುಗಳನ್ನು ಮಾಡಿದರೂ ಅವುಗಳೆಲ್ಲ ನಶ್ವರವೇ ಆಗುವುವು. ಈ ಅಕ್ಷರವನ್ನು ಅರಿತುಕೊಳ್ಳದೆ ಈ ಲೋಕವನ್ನು ಬಿಡುವವನು ಕೃಪಣನು, ಆದರೆ ಈ ಅಕ್ಷರವನ್ನು ತಿಳಿದುಕೊಂಡು ಈ ಲೋಕವನ್ನು ಬಿಡುವವನು ಬ್ರಹ್ಮವಿದನು ಎಂದು ಯಾಜ್ಞವಲ್ಕ್ಯನು ಉಪಸಂಹಾರಮಾಡುತ್ತಾನೆ.

ದೇವತೆಗಳ ವೃದ್ಧಿಕ್ಷಯಗಳ ಮೂಲಕ ಆತ್ಮನ ಸಾಕ್ಷಾದಪರೋಕ್ಷತ್ವವನ್ನು ಒಂಬತ್ತನೆಯದಾದ ಶಾಕಲ್ಯಬ್ರಾಹ್ಮಣದಲ್ಲಿ ನಿರ್ಧರಿಸಿದೆ. ವಿದಗ್ಧ ಶಾಕಲ್ಯನು ದೇವತೆಗಳು ಎಷ್ಟೆಂದು ಕೇಳಲು ಯಾಜ್ಞವಲ್ಕ್ಯನು ಹೇಳುತ್ತಾನೆ : ದೇವತೆಗಳು ಅಸಂಖ್ಯಾತರಾಗಿದ್ದರೂ ಅವರೆಲ್ಲ ಒಂದೇ ದೇವತೆಯ ಎಂದರೆ ಹಿರಣ್ಯಗರ್ಭನ ಅಥವಾ ಪ್ರಾಣನ ವಿಭೂತಿಗಳು. ಹಿರಣ್ಯಗರ್ಭನು ಏಕನೂ ಅನಂತನೂ ಆಗಿದ್ದಾನೆ ಇವನೇ ಅನಂತ ಸಂಖ್ಯಾತನಾಗಿ ವಿಸ್ತರಿಸುತ್ತಾನೆ ಮತ್ತು ಒಂದೇ ದೇವತೆಯಾಗುತ್ತಾನೆ. ಒಂದೇ ದೇವತೆಯಲ್ಲಿ ಉಂಟಾಗಿರುವ ನಾಮರೂಪಾದಿ ಭೇದಕ್ಕೆ ಉಪಾಸಕರ ಬೇದವೇ ಕಾರಣ. ಉಪಾಸಕನು ಹಿರಣ್ಯಗರ್ಭನೊಂದಿಗೆ ತಾದಾತ್ಮ್ಯವನ್ನು ಪಡೆದಿರುವಾಗ ಅವನ ಮನಸ್ಸು ದಿಕ್ಕುಗಳಲ್ಲೆಲ್ಲ ವ್ಯಾಪಿಸಿಕೊಂಡು, ಅವನು ದಿಕ್ಕುಗಳ ಮತ್ತು ದಿಗ್ದೇವತೆಗಳ ಆತ್ಮನಾಗುತ್ತಾನೆ. ಕೊನೆಗೆ ಯಾಜ್ಞವಲ್ಕ್ಯನು ಅಲ್ಲಿದ್ದ ಬ್ರಾಹ್ಮಣರನ್ನು ಹೀಗೆ ಪ್ರಶ್ನಿಸಿದನು : ಒಂದು ವೃಕ್ಷವನ್ನು ಬೇರು ಮುಟ್ಟ ಕಿತ್ತುಹಾಕಿದರೆ ಅದು ಪುನಃ ಹುಟ್ಟುವುದಿಲ್ಲ. ಮನುಷ್ಯನು ಮೃತ್ಯುವಿನಿಂದ ಕತ್ತರಿಸಲ್ಪಟ್ಟ ಮೇಲೆ ಯಾವ ಬೇರಿನಿಂದ ಹುಟ್ಟುತ್ತಾನೆ ? ಮೃತನಾದವನು ಯಾವುದರಿಂದ ಪುನಃ ಹುಟ್ಟುತ್ತಾನೆಯೊ ಆ ಜಗನ್ಮೂಲವು ಬ್ರಾಹ್ಮಣರಿಗೆ ತಿಳಿದಿರಲಿಲ್ಲ. ಯಾಜ್ಞವಲ್ಕ್ಯನೇ ಬ್ರಹ್ಮಿಷ್ಠನೆಂದೂ ಇತರರೆಲ್ಲ ಸೋತರೆಂದೂ ಆಖ್ಯಾಯಿಕೆ

ಯಿಂದ ತಿಳಿದುಬರುತ್ತದೆ. ಯಾಜ್ಞವಲ್ಕ್ಯನು ಪ್ರಶ್ನಿಸಿದ ಜಗನ್ಮೂಲವಾದ ಬ್ರಹ್ಮವನ್ನು ಉಪನಿಷತ್ತು ತನ್ನ ರೂಪದಿಂದಲೇ ನಮಗೆ ತಿಳಿಸುತ್ತವೆ: ವಿಜ್ಞಾನವೂ ಆನಂದವೂ ಮೂಲದಿಂದಲೇ ಮೃತನಾದ ಮನುಷ್ಯನು ಹುಟ್ಟುತ್ತಾನೆ.

## ನಾಲ್ಕನೆಯ ಅಧ್ಯಾಯ

ನಾಲ್ಕನೆಯ ಅಧ್ಯಾಯವು ಆರು ಬ್ರಾಹ್ಮಣಗಳಾಗಿ ವಿಂಗಡಿಸಲ್ಪಟ್ಟಿದೆ. ಹಿಂದೆ ಔಪನಿಷದ ಪುರುಷನನ್ನು ಸಾಕ್ಷಾತ್ತಾಗಿಯೂ ಉಪಾದಾನಕಾರಣ ಸ್ವರೂಪದಿಂದಲೂ ನಿರ್ದೇಶಿಸಲಾಯಿತು. ಈಗ ಅವನನ್ನೇ ವಾಗಾದಿ ದೇವತೆಗಳ ಮೂಲಕ ತಿಳಿಸುವುದಕ್ಕೆ ಮೊದಲನೆಯ ಮತ್ತು ಎರಡನೆಯ ಬ್ರಾಹ್ಮಣಗಳನ್ನು ಆರಂಭಿಸಿರುತ್ತದೆ. ಜನಕ ವೈದೇಹನು ಸಭೆಯಲ್ಲಿ ಕುಳಿತಿರುವಾಗ ಯಾಜ್ಞವಲ್ಕ್ಯನು ಬಂದು ಕೆಲವು ಪ್ರಶ್ನೆಗಳನ್ನು ಹಾಕುತ್ತಾನೆ. ಈ ಪ್ರಶ್ನೆಗಳಿಗೆ ಉತ್ತರವಾಗಿ ಜನಕನು ತಾನು ಹಿಂದೆ ಆರುಮಂದಿ ಆಚಾರ್ಯ ರಿಂದ ಅರಿತುಕೊಂಡ ಬ್ರಹ್ಮದ ಕೆಲವು ಲಕ್ಷಣಗಳನ್ನು ಹೇಳುತ್ತಾನೆ. ವಾಕ್ಕು, ಪ್ರಾಣ, ಕಣ್ಣು, ಕಿವಿ, ಮನಸ್ಸು, ಬುದ್ಧಿ ಇವುಗಳ ಅಧಿಷ್ಠಾತೃ ದೇವತೆಗಳಾದ ಅಗ್ನಿ, ವಾಯು, ಆದಿತ್ಯ, ದಿಗ್ದೇವತೆ, ಚಂದ್ರ ಮತ್ತು ಪ್ರಜಾಪತಿ(ಹಿರಣ್ಯಗರ್ಭ) ಇವರನ್ನು ಒಬ್ಬೊಬ್ಬರನ್ನಾಗಿ ಬ್ರಹ್ಮವೆಂದು ಹೇಳುತ್ತಾನೆ. ಈ ಬ್ರಹ್ಮಗಳಿಗೆಲ್ಲ ಒಂದೇ ಕಾಲಿದೆಯೆಂದು ಯಾಜ್ಞವಲ್ಕ್ಯನು ತಿಳಿಸುತ್ತಾನೆ.

ಎರಡನೆಯ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯನು ಆತ್ಮನ ಅವಸ್ಥಾತ್ರಯವನ್ನು ಉಪದೇಶಿಸುತ್ತಾನೆ: ಜಾಗ್ರತ್–ಸ್ವಪ್ನ–ಸುಷುಪ್ತಿಗಳಲ್ಲಿ ಸ್ಥೂಲ–ಸೂಕ್ಷ್ಮ–ಕಾರಣ ಶರೀರಗಳೊಂದಿಗೆ ತಾದಾತ್ಮ್ಯವನ್ನು ಪಡೆದಿರುವ ಆತ್ಮನಿಗೆ ವಿಶ್ವ (ಅಥವಾ ವೈಶ್ವಾನರ), ತೈಜಸ, ಪ್ರಾಜ್ಞ ಎಂಬ ಹೆಸರುಗಳಿವೆ. ಸರ್ವಾತ್ಮನಾದ ಪ್ರಾಜ್ಞನಲ್ಲಿ ಎಲ್ಲವನ್ನೂ ಲಯಗೊಳಿಸಿದ ಮೇಲೆ ಯಾವ ವಿಶೇಷವೂ ಉಳಿಯುವುದಿಲ್ಲ. ಇವನು ಅಗೃಹ್ಯನು, ಅಕ್ಷಯನು, ಅಸಂಗನು ಮತ್ತು ಬಂಧರಹಿತನು. ಇಲ್ಲಿ ಹಿರಣ್ಯಗರ್ಭನನ್ನು ಹೊಂದಿರುವ ಋಷಿಯ ವ್ಯಾಪ್ತಿಯನ್ನು ಹೇಳಿದೆ

ಅತ್ಯಂತ ದೊಡ್ಡದಾಗಿರುವ ಮೂರನೆಯ ಬ್ರಾಹ್ಮಣಕ್ಕೆ ಜ್ಯೋತಿ–ಬ್ರಾಹ್ಮಣವೆಂದು ಹೆಸರು, ಸುರೇಶ್ವರಾಚಾರ್ಯರು ಇದರ ಮೇಲೆ ೧೫೭೩

ಶ್ಲೋಕಗಳನ್ನು ತಮ್ಮ ವಾರ್ತಿಕವಲ್ಲಿ ಬರೆದಿರುತ್ತಾರೆ. ಹಿಂದಿನ ಬ್ರಾಹ್ಮಣ ದಲ್ಲಿ ಪರೀಕ್ಷಿಸಿದ ಅವಸ್ಥಾತ್ರಯವನ್ನು ಇಲ್ಲಿ ಯುಕ್ತಿಯ ಮೂಲಕ ವಿಸ್ತಾರ ವಾಗಿ ವಿವರಿಸಿದೆ. ಶರೀರೇಂದ್ರಿಯಗಳಿಂದ ಕೂಡಿದ ಪ್ರಾಕೃತ ಮನುಷ್ಯನಿಗೆ ಜ್ಯೋತಿಯು ಯಾವುದೆಂದು ಜನಕನು ಪುನಃ ಪುನಃ ಯಾಜ್ಞವಲ್ಕ್ಯನನ್ನು ಪ್ರಶ್ನಿಸುತ್ತಾನೆ. ಆಗ ಯಾಜ್ಞವಲ್ಕ್ಯನು ಆದಿತ್ಯ, ಚಂದ್ರ, ಅಗ್ನಿ, ವಾಕ್ಕು, ಆತ್ಮ-ಇವರ ಜ್ಯೋತಿಗಳನ್ನು ಒಂದೊಂದಾಗಿ ಹೇಳುತ್ತಾನೆ ದೇಹೇಂದ್ರಿ ಯಾದಿಗಳಲ್ಲಿರುವ ಆ ಆತ್ಮನು ಯಾವನೆಂದು ಜನಕನು ಪ್ರಶ್ನಿಸಿದಾಗ ಯಾಜ್ಞ ವಲ್ಕ್ಯನು ಹೇಳುತ್ತಾನೆ : ಒಂದು ದೊಡ್ಡ ಮೀನು ನದಿಯ ಒಂದು ದಡದಿಂದ ಮತ್ತೊಂದು ದಡಕ್ಕೆ ಈಜುವ ಹಾಗೆ ಆತ್ಮನು ಬುದ್ಧಿಯ ರೂಪವನ್ನು ತಾಳಿ ಸ್ವಪ್ನದಿಂದ ಜಾಗ್ರತ್ತಿಗೂ ಜಾಗ್ರತ್ತಿನಿಂದ ಸ್ವಪ್ನಕ್ಕೂ ಸಂಚರಿಸುತ್ತಾನೆ ಸ್ವಚ್ಛಗುಣವುಳ್ಳ ಬುದ್ಧಿಯು ಆತ್ಮನಿಗೆ ಅತ್ಯಂತ ಸಮೀಪದಲ್ಲಿರುವುದರಿಂದ ಆತ್ಮಚೈತನ್ಯವನ್ನು ಪ್ರತಿಬಿಂಬಿಸುತ್ತದೆ ಸ್ವಚ್ಛಗುಣವುಳ್ಳ ಸ್ಫಟಿಕವು ದೀಪ ದಿಂದ ಪ್ರಕಾಶಿಸುವಂತೆ ಸ್ವಾಭಾವಿಕವಾಗಿ ಜಡವಾಗಿರುವ ಬುದ್ಧಿಯು ಆತ್ಮದೀಪ್ತಿಯಿಂದ ಪ್ರಕಾಶಿಸುವಂತೆ ತೋರುತ್ತದೆ. ಪರಮಾರ್ಥತಃ ಆತ್ಮನು ಮಾತ್ರ ಸ್ವಯಂಜ್ಯೋತಿಯು. ಇವನ ಜ್ಯೋತಿಯಿಂದಲೇ ಸೂರ್ಯಚಂದ್ರಾದಿ ಗಳೆಲ್ಲ ಪ್ರಕಾಶಿಸುತ್ತಾರೆ.

ಸ್ವಪ್ನದಲ್ಲಿ ಆತ್ಮನು ತನ್ನ ಶರೀರವನ್ನು ಅಚೇತನಗೊಳಿಸಿ, ಜಾಗ್ರದ ವಸ್ಥೆಯ ವಾಸನೆಗಳಿಂದ ಸ್ವಪ್ನ ಶರೀರವನ್ನು ನಿರ್ಮಿಸಿಕೊಳ್ಳುತ್ತಾನೆ. ಸಾಮಾ ನ್ಯವಾಗಿ ಸ್ವಪ್ನವು ಒಂದು ಹೊಸ ಅನುಭವವಲ್ಲ, ಅದು ಜಾಗ್ರದವಸ್ಥೆಯ ಅನುಭವವನ್ನು ಅವಲಂಬಿಸಿರುತ್ತದೆ ಆದರೆ ಕೆಲವು ವೇಳೆ ಈ ಜೀವನದಲ್ಲಿ ಅನುಭವಿಸದ ಸ್ವಪ್ನಗಳನ್ನೂ ನೋಡುತ್ತೇವೆ ಇಂಥ ಸ್ವಪ್ನಗಳ ಆಧಾರವು ಹಿಂದಿನ ಜನ್ಮಗಳ ಅನುಭವವೆಂದು ಸಿದ್ಧವಾಗುತ್ತದೆ ಸ್ವಪ್ನದಲ್ಲಿ ನೋಡುವ ವಿಷಯಗಳೆಲ್ಲ ಆತ್ಮನಿಂದ ಅಲ್ಲೇ ನಿರ್ಮಿತವಾದುವು. ಈ ಅವಸ್ಥೆಯಲ್ಲಿ ಇಂದ್ರಿಯಗಳಾಗಲಿ, ಅವುಗಳಿಗೆ ಅನುಗ್ರಾಹಕವಾಗಿರುವ ಬಾಹ್ಯಪ್ರಕಾಶ ವಾಗಲಿ ಅಥವಾ ಅವುಗಳಿಂದ ಪ್ರಕಾಶಿಸಲ್ಪಡುವ ವಿಷಯಗಳಾಗಲಿ ಇರುವು ದಿಲ್ಲ. ಆತ್ಮನು ಶರೀರದಲ್ಲಿ ಸಂಚರಿಸುತ್ತಿದ್ದರೂ ಅವನಿಗೂ ಶರೀರಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಸ್ವಪ್ನದಲ್ಲಿ ಆತ್ಮನು ಪುಣ್ಯಪಾಪಗಳ

ಫಲವನ್ನು ಸುಮ್ಮನೆ ನೋಡುತ್ತಾನೆಯೇ ವಿನಾ ಸಾಕ್ಷಾತ್ತಾಗಿ ಅನುಭವಿಸುವು ದಿಲ್ಲ. ಏಕೆಂದರೆ ಅವನು ಅಸಂಗನು

ಆತ್ಮನು ಸ್ವಪ್ನದಿಂದ ಸುಷುಪ್ತಿಗೆ ಹೋಗಿ ಅಲ್ಲಿಂದ ಹಿಂದಿನ ಅವಸ್ಥೆಗೆ ಬರುತ್ತಾನೆ ಜಾಗ್ರದವಸ್ಥೆಯಲ್ಲಿ ಆತ್ಮನು ಶರೀರೇಂದ್ರಿಯಗಳ ವ್ಯಾಪಾರ ದಿಂದುಂಟಾದ ಕಾಲುಷ್ಯವನ್ನು ಅನುಭವಿಸುವಂತೆ ತೋರುತ್ತಾನೆ; ಸ್ವಪ್ನದಲ್ಲಿ ಅವುಗಳನ್ನು ಬಿಟ್ಟು ಸ್ವಲ್ಪ ಪ್ರಸನ್ನತೆಯನ್ನು ಹೊಂದಿದವನಂತೆ ಇರುತ್ತಾನೆ. ಆದರೆ ಸುಷುಪ್ತಿಯಲ್ಲಿ ಪೂರ್ಣವಾಗಿ ಪ್ರಸನ್ನನಾಗುತ್ತಾನೆ ಆದುದರಿಂದ ಸುಷುಪ್ತಿಗೆ ಸಂಪ್ರಸಾದವೆಂದು ಹೆಸರು ಈ ಅವಸ್ಥೆಯನ್ನೇ 'ಎಲ್ಲ ಶೋಕ ಗಳನ್ನೂ ದಾಟಿರುತ್ತಾನೆ' (೪, ೩. ೨೨) ಎಂದು ಹೇಳಿದೆ. ಸುಷುಪ್ತಿಯಲ್ಲಿ ಹೊಂದಿದ ಸರ್ವಾತ್ಮಭಾವವೇ ಕಾಮರಹಿತವೂ ಧರ್ಮಾಧರ್ಮವರ್ಜಿತವೂ ಅಭಯವೂ ಆದ ಇವನ ಸ್ವರೂಪ ಇವನು ಪರಮಾತ್ಮನಿಂದ ಆಲಿಂಗಿತ ನಾಗಿ ಒಳಗಿನ ಅಥವಾ ಹೊರಗಿನ ಯಾವುದನ್ನೂ ಅರಿಯುವುದಿಲ್ಲ ಈ ಅವಸ್ಥೆಯಲ್ಲಿ ನೋಡಲು, ಕೇಳಲು ಮುಟ್ಟಲು ಅಥವಾ ಅರಿತುಕೊಳ್ಳಲು ಆತ್ಮನಿಗಿಂತ ಭಿನ್ನವಾದ ಎರಡನೆಯ ವಸ್ತುವು ಇರುವುದಿಲ್ಲ. ಸುಷುಪ್ತಿಯಲ್ಲಿ ಅನುಭವಿಸಲ್ಪಟ್ಟ ಆನಂದವು ಮನುಷ್ಯರ, ಪಿತೃಗಳ, ಗಂಧರ್ವರ, ಕರ್ಮ ದೇವತೆಗಳ, ಅಜಾನದೇವತೆಗಳ ಅಥವಾ ಹಿರಣ್ಯಗರ್ಭನ ಆನಂದಗಳಿಗಿಂತ ಅತಿಶಯವಾಗಿರುತ್ತದೆ ಇದೇ ಪರಮಾನಂದ, ಇದೇ ಬ್ರಾಹ್ಮೀಸ್ಥಿತಿ

ಮದ್ರಾಸ್ ರಾಮಕೃಷ್ಣಮಠದಿಂದ ಪ್ರಕಾಶಿತವಾದ ಬೃಹದಾರಣ್ಯ- ಕೋಪನಿಷತ್ತಿನಲ್ಲಿ ಅದರ ಟೀಕಾಕಾರರು ಈ ಸಂದರ್ಭದಲ್ಲಿ ಹೀಗೆ ಹೇಳಿರು ತ್ತಾರೆ: ಸುಷುಪ್ತಿಯಲ್ಲಿ ಅವಿದ್ಯೆಯು ಅಶೇಷವಾಗಿ ನಾಶವಾಗಿರುವುದೆಂದು ತಿಳಿಯುವುದು ತಪ್ಪು. ಆಗ ಅವಿದ್ಯೆಯು ಉಳಿದುಕೊಂಡಿದ್ದರೂ ಅದು— ಆನಂದಗಿರಿಯು ತನ್ನ ಟೀಕೆಯಲ್ಲಿ (ಬೃ. ಉ. ೪, ೩, ೨೧) ಹೇಳಿರುವಂತೆ— ಅವ್ಯಕ್ತವಾಗಿರುತ್ತದೆ. 'ಸುಷುಪ್ತಿಯಲ್ಲಿ ಅರಿವು ಇರುವುದಿಲ್ಲ : ಆಗ ಬುದ್ಧಿಯು ತನ್ನ ಕಾರಣಾವಸ್ಥೆಯಲ್ಲಿ (ಎಂದರೆ ಅವಿದ್ಯೆಯಲ್ಲಿ) ಇರುತ್ತದೆ "ನನಗೇನೂ ತಿಳಿದಿರಲಿಲ್ಲ" ಎಂಬ (ಎಚ್ಚರಗೊಂಡವನ) ನೆನಪಿನಿಂದ ಇದು ಸಿದ್ಧವಾಗಿದೆ ; ಹಿಂದಿನ ಅನುಭವವಿಲ್ಲದಿದ್ದರೆ ಇಂಥ ಸ್ಮರಣೆಯು ಸಾಧ್ಯವಾಗು ತ್ತಿರಲಿಲ್ಲ' ಎಂದು ಆನಂದಗಿರಿಯು ತಾನು ಸುರೇಶ್ವರರ ವಾರ್ತಿಕದ (೧೦೫೨)

ಪೋಲಿ ಬರೆದಿರುವ ಟೀಕೆಯಲ್ಲಿ ಹೇಳಿರುತ್ತಾನೆ. ವಿದ್ಯಾರಣ್ಯರು ತಮ್ಮ ಬೃಹದಾರಣ್ಯಕವಾರ್ತಿಕಸಾರದಲ್ಲಿ ಹೀಗೆ ಹೇಳಿರುತ್ತಾರೆ ಸುಷುಪ್ತಿಯಲ್ಲಿ ಬಯಕೆಗಳು ಹೊರಟುಹೋಗಿದ್ದರೂ ಅವುಗಳ ವಾಸನೆಗಳು ಉಳಿಯುತ್ತವೆ ಅನ್ಯಥಾ ಅವು ಜಾಗ್ರದವಸ್ಥೆಯಲ್ಲಿ ಪುನಃ ಹೇಗೆ ಬರುತ್ತವೆ ?' ಮೂಲಾ ವಿದ್ಯೆಯು ಸುಷುಪ್ತಿಯಲ್ಲಿ ಇರುತ್ತದೆಂದು ಶ್ರೀಶಂಕರಾಚಾರ್ಯರು ಅನೇಕ ಸಂದರ್ಭಗಳಲ್ಲಿ ಹೇಳಿರುವ ಅಭಿಪ್ರಾಯವನ್ನೇ ಸುರೇಶ್ವರ, ವಿದ್ಯಾರಣ್ಯ-ಆನಂದಗಿರಿ— ಇವರು ವ್ಯಕ್ತಪಡಿಸಿದ್ದಾರೆ.

ಇಲ್ಲಿಂದ ಜೀವನು ದೇಹಾಂತರ ಹೊಂದುವುದನ್ನು ಬ್ರಾಹ್ಮಣವು ಹೇಳುತ್ತದೆ ದೇಹಾಂತರವನ್ನು ಹೊಂದುತ್ತಿರುವ ಜೀವನ ದುಃಸ್ಥಿತಿಯನ್ನು ಇಲ್ಲಿ ಹೇಳಿರುವುದು ವೈರಾಗ್ಯವನ್ನು ಉಂಟುಮಾಡುವುದಕ್ಕಾಗಿ ಪಕ್ವವಾದ ಹಣ್ಣು ಕಳಚಿಬೀಳುವಂತೆ ಇವನು ಮುಪ್ಪಿನಿಂದಲೊ ಅಥವಾ ರೋಗದಿಂದಲೊ ಕೃಶನಾಗಿ ಅಂಗಗಳನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವನು ಇಡೀ ಜಗತ್ತೇ ಇವನ ಕರ್ಮದಿಂದ ಪ್ರೇರಿತವಾಗಿ ಇವನ ಕರ್ಮಫಲ-ಭೋಗಕ್ಕಾಗಿ ಬೇರೊಂದು ಶರೀರವನ್ನು ಸಿದ್ಧಪಡಿಸುವುದು ಸ್ವಪ್ನದಿಂದ ಎಚ್ಚರಕ್ಕೆ ಬರುತ್ತಿರುವ ಮನುಷ್ಯನಿಗೆ ಸಂಸರಿಸುತ್ತಿರುವ ಜೀವನನ್ನು ಹೋಲಿಸಬಹುದು.

ಹಿಂದಿನ ಬ್ರಾಹ್ಮಣದಲ್ಲಿ ಜೀವಾತ್ಮನು ದೇಹದ ಅಂಗಗಳಿಂದ ಕಳಚಿಕೊಂಡು ಹೋಗುತ್ತಾನೆ (೪, ೩, ೩೬) ಎಂದು ಹೇಳಿದ್ದಾಯಿತು ನಾಲ್ಕನೆಯದಾದ ಶಾರೀರಕಬ್ರಾಹ್ಮಣದಲ್ಲಿ ಯಾವಾಗ ಮತ್ತು ಹೇಗೆ ಅಂಗಗಳಿಂದ ಕಳಚಿಕೊಳ್ಳುತ್ತಾನೆ ಎಂಬುದನ್ನು ವಿಸ್ತಾರವಾಗಿ ಹೇಳಿದೆ. ದೌರ್ಬಲ್ಯವನ್ನು ಹೊಂದಿ ಮೋಹವನ್ನು ಪಡೆದಂತಾಗುವ ಮರಣಕಾಲದಲ್ಲಿ ಜೀವನು ಇಂದ್ರಿಯಗಳನ್ನು ಉಪಸಂಹರಿಸಿಕೊಂಡು ಹೃದಯಕ್ಕೆ ಸೇರುತ್ತಾನೆ. ಆಗ ಇಂದ್ರಿಯಗಳ ಅಧಿಷ್ಠಾತೃದೇವತೆಗಳ ಅಂಶಗಳು ತಮ್ಮ ತಮ್ಮ ಕಾರಣಗಳಿಗೆ ಹಿಂತಿರುಗುತ್ತವೆ ಮುಂದಿನ ಜನ್ಮದ ಶರೀರದ 'ವಾಸನೆಗಳನ್ನು' ಜೀವನು ಅರಿತುಕೊಂಡು ಶರೀರದ ಯಾವುದಾದರೂ ಒಂದು ಅಂಗದ ಮೂಲಕ ನಿಷ್ಕ್ರಮಿಸುತ್ತಾನೆ. ಉಪಾಸನೆ, ಕರ್ಮ ಮತ್ತು ಹಿಂದಿನ ಕರ್ಮಫಲಾನುಭವದ ವಾಸನೆ ಇವು ಇವನನ್ನು ಅನುಸರಿ

ಸುತ್ತವೆ. ಅಕ್ಕಸಾಲಿಗನು ಚಿನ್ನದಿಂದ ಹೊಸ ವಸ್ತುಗಳನ್ನು ರೂಪಿಸುವಂತೆ ಜೀವನು ತನ್ನ ಕರ್ಮಕ್ಕೆ ಅನುಗುಣವಾದ ಮತ್ತೊಂದು ಹೊಸ ಶರೀರವನ್ನು ಧರಿಸುತ್ತಾನೆ ಕರ್ಮಫಲವು ಕ್ಷಯವಾದ ಮೇಲೆ ಜೀವನು ಆ ಲೋಕ ದಿಂದ ಈ ಲೋಕಕ್ಕೆ ಹೊಸ ಕರ್ಮವನ್ನು ಮಾಡಲು ಹಿಂತಿರುಗುತ್ತಾನೆ. ಕಾಮದಿಂದ ಉತ್ಕ್ರಾಂತಿಯೂ ಅಕಾಮದಿಂದ ಅನುತ್ಕ್ರಾಂತಿಯೂ ಆಗು ತ್ತವೆ. ಅಕಾಮಿಯೂ ನಿಷ್ಕಾಮಿಯೂ ಆಪ್ತಕಾಮಿಯೂ ಆತ್ಮಕಾಮಿಯೂ ಆದವನ ಇಂದ್ರಿಯಗಳು ಉತ್ಕ್ರಮಿಸುವುದಿಲ್ಲ; ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ ಹೃದಯದಲ್ಲಿರುವ ಕಾಮಗಳೆಲ್ಲ ಬಿಟ್ಟು ಹೋದಾಗ ಮರ್ತ್ಯನು ಅಮೃತನಾಗುತ್ತಾನೆ ಪ್ರಾಣರಹಿತವಾದ ಹಾವಿನ ಪೊರೆಯಂತೆ ಬ್ರಹ್ಮಜ್ಞಾನಿಯು ಅಚೇತನವಾದ ಶರೀರವನ್ನು ಒಗೆಯುತ್ತಾನೆ ಸಂಸಾರ ದಲ್ಲಿರುವಾಗಲೇ ಬ್ರಹ್ಮವನ್ನು ಅರಿತುಕೊಳ್ಳಬೇಕು, ಇಲ್ಲದಿದ್ದರೆ ಬಹಳ ನಷ್ಟ ವಾಗುವುದು.

ಬ್ರಹ್ಮದಲ್ಲಿ ಸ್ವಲ್ಪವೂ ನಾನಾತ್ವವಿಲ್ಲ. ಅದರಲ್ಲಿ ನಾನಾತ್ವವನ್ನು ನೋಡುವವನು ಮೃತ್ಯುವಿನಿಂದ ಮೃತ್ಯುವಿಗೆ ಹೋಗುತ್ತಾನೆ. ಆದುದರಿಂದ ಅಪ್ರಮೇಯವಾದ ಬ್ರಹ್ಮವನ್ನು ಏಕರಸವಾಗಿಯೇ ಅರಿತುಕೊಳ್ಳಬೇಕು. ಸಾಧಕನಾದವನು ಆತ್ಮೈಕತ್ವವನ್ನು ತಿಳಿಸದ ಶಬ್ದಗಳನ್ನು ಚಿಂತಿಸಕೂಡದು; 'ಬೇರೆ ಮಾತುಗಳನ್ನು ಬಿಡಿರಿ' ಅನ್ಯಾ ವಾಚೋ ವಿಮುಂಚಥ ಎಂದು ಶ್ರುತಿಯು ಹೇಳುತ್ತದೆ. ಆತ್ಮನು ಶಾಸ್ತ್ರವಿಹಿತವಾದ ಕರ್ಮದಿಂದ ವರ್ಧಿಸು ವುದಿಲ್ಲ, ಶಾಸ್ತ್ರಪ್ರತಿಷಿದ್ಧ ಕರ್ಮದಿಂದ ಅಲ್ಪನಾಗುವುದಿಲ್ಲ. ಇವನನ್ನೇ ಅರಿತು ಕೊಂಡು ಮನುಷ್ಯನು ಮುನಿಯಾಗುತ್ತಾನೆ. ಈ ಆತ್ಮಲೋಕವನ್ನೇ ಬಯ ಸುತ್ತ, ಮನುಷ್ಯ-ಪಿತೃ-ದೇವಲೋಕಗಳನ್ನು ಬಯಸದೆ, ಮುಮುಕ್ಷುಗಳು ಪ್ರವ್ರಜನಮಾಡುತ್ತಾರೆ. ಆತ್ಮಸ್ವರೂಪವು 'ಹೀಗಿದೆ' ಎಂದು ಲಕ್ಷಣಗಳಿಂದ ಹೇಳಲಾಗುವುದಿಲ್ಲ ; 'ಹೀಗಲ್ಲ ಹೀಗಲ್ಲ' ಎಂದೇ ಹೇಳಬೇಕು. ಅವನು ಅಗೃಹ್ಯನು, ಅಕ್ಷಯನು ಮತ್ತು ಅಸಂಗನು. 'ಇದಕ್ಕಾಗಿ ಪಾಪವನ್ನು ಮಾಡಿದೆನು, ಇದಕ್ಕಾಗಿ ಪುಣ್ಯವನ್ನು ಮಾಡಿದೆನು' ಎಂಬ ಚಿಂತೆಗಳು ಆತ್ಮ-ಜ್ಞಾನಿಯನ್ನು ವ್ಯಾಕುಲಗೊಳಿಸುವುದಿಲ್ಲ. ಇವನು ಶಾಂತನೂ ದಾಂತನೂ ಉಪರತನೂ ತಿತಿಕ್ಷುವೂ ಸಮಾಹಿತನೂ ಆಗಿ ತನ್ನ ಶರೀರದಲ್ಲಿಯೇ ಆತ್ಮನನ್ನು

ನೋಡುತ್ತಾನೆ. ಮತ್ತು ಸರ್ವವನ್ನೂ ಆತ್ಮನನ್ನಾಗಿ ನೋಡುತ್ತಾನೆ. ಇವನು ಪಾಪರಹಿತನೂ, ವಿರಜನೂ, ಸಂಶಯರಹಿತನೂ ಆಗಿ ಅಭಯವಾದ ಬ್ರಹ್ಮವೇ ಆಗುತ್ತಾನೆ.

ಐದನೆಯ ಬ್ರಾಹ್ಮಣದಲ್ಲಿ ಮಧು-ಮುನಿ-ಕಾಂಡಗಳಲ್ಲಿ ಆಗಮ-ಯುಕ್ತಿಗಳಿಂದ ಪ್ರತಿಪಾದಿತವಾದ ಬ್ರಹ್ಮತತ್ತ್ವವನ್ನು ಉಪಸಂಹಾರಮಾಡಿರುತ್ತದೆ. ಎರಡನೆಯ ಅಧ್ಯಾಯದ ನಾಲ್ಕನೆಯ ಬ್ರಾಹ್ಮಣವೇ(ಮೈತ್ರೇಯೀಬ್ರಾಹ್ಮಣ) ಇಲ್ಲಿ ಮತ್ತೊಮ್ಮೆ ಬಂದಿದೆ. ಆರನೆಯದಾದ ವಂಶಬ್ರಾಹ್ಮಣವು ಯಾಜ್ಞ- ವಲ್ಕೀಯಕಾಂಡದ ಆಚಾರ್ಯರ ವಂಶವನ್ನು ತಿಳಿಸುತ್ತದೆ. ಮಧುಕಾಂಡದಂತೆ ಇಲ್ಲಿಯೂ ಹಿರಣ್ಯಗರ್ಭನೇ ಮೂಲಪುರುಷನು

## ಐದನೆಯ ಅಧ್ಯಾಯ

ಕೊನೆಯದಾದ ಖಿಲಕಾಂಡವು ಐದನೆಯ ಮತ್ತು ಆರನೆಯ ಅಧ್ಯಾಯಗಳನ್ನೊಳಗೊಂಡಿದೆ. ಖಿಲವೆಂದರೆ ಪರಿಶಿಷ್ಟ ಅಥವಾ ಅನುಬಂಧ. ನಿರುಪಾಧಿಕ ಬ್ರಹ್ಮಸ್ವರೂಪವನ್ನು ಹಿಂದಿನ ನಾಲ್ಕು ಅಧ್ಯಾಯಗಳಲ್ಲಿ ನಿರ್ಧರಿಸಲಾಯಿತು. ಈಗ ಸೋಪಾಧಿಕವೂ ಶಬ್ದಾರ್ಥಾದಿವ್ಯವಹಾರಕ್ಕೆ ವಿಷಯವೂ ಆದ ಅದೇ ಬ್ರಹ್ಮದ ಕೆಲವು ಉಪಾಸನೆಗಳನ್ನು ತಿಳಿಸಲು ಐದನೆಯ ಅಧ್ಯಾಯವು ಬಂದಿರುತ್ತದೆ. ಈ ಉಪಾಸನೆಗಳು ಕರ್ಮಗಳಿಗೆ ಅವಿರುದ್ಧವಾಗಿಯೂ ಅಭ್ಯುದಯಕ್ಕೆ ಸಾಧನಗಳಾಗಿಯೂ ಕ್ರಮಮುಕ್ತಿಗೆ ಕಾರಣಗಳಾಗಿಯೂ ಅವೆ. ಮೊದಲನೆಯ ಬ್ರಾಹ್ಮಣವು ಪ್ರಸಿದ್ಧವಾದ ಶಾಂತಿಪಾಠದಿಂದ ಪ್ರಾರಂಭವಾಗುತ್ತದೆ: ಪೂರ್ಣವಾದ ಜಗತ್ತು ಪೂರ್ಣವಾದ ಬ್ರಹ್ಮದಿಂದ ಹೊರಟುಬಂದಿದೆ ; ಬ್ರಹ್ಮವೇ ಜಗತ್ತೆಂದು ಗ್ರಹಿಸಿದ ಮೇಲೆ ಬ್ರಹ್ಮವೊಂದೇ ಉಳಿಯುತ್ತದೆ. ಜಗತ್ತು ಬ್ರಹ್ಮದಿಂದ ಹೊರಬಂದರೂ ಬ್ರಹ್ಮದಲ್ಲಿ ಯಾವ ಪರಿಣಾಮವೂ ಉಂಟಾಗುವುದಿಲ್ಲ; ಏಕೆಂದರೆ ಸೋಪಾಧಿಕಬ್ರಹ್ಮದಿಂದ ಉಂಟಾಗುವ ಭಿನ್ನತೆ ಅಥವಾ ಅನ್ಯತ್ವವು ಕೇವಲ ಅಭ್ಯಾಸವಾಗಿದೆ. ಅನಂತರ ಪ್ರಣವೋಪಾಸನೆಯನ್ನು ವಿಧಿಸಿದೆ. ಓಂಕಾರವು ಬ್ರಹ್ಮಕ್ಕೆ ಅತ್ಯಂತ ನಿಕಟವರ್ತಿಯಾದ ಹೆಸರು. ಆದುದರಿಂದ ಬ್ರಹ್ಮಪ್ರಾಪ್ತಿಗೆ ಇದು ಶ್ರೇಷ್ಠವಾದ ಸಾಧನವಾಗಿರುತ್ತದೆ. ಓಂಕಾರವು ಬ್ರಹ್ಮದ

ಪ್ರತೀಕವೂ ನಾಮವೂ ಆಗಿದೆ. ಓಕಾರವೆಂಬ ಆಲಂಬನವು ಶ್ರೇಷ್ಠವೆಂದು ಪರವೆಂದು ಕಠಶ್ರುತಿಯೂ (೧, ೨, ೧೭), ಓಂ ಎಂದು ಆತ್ಮನನ್ನು ಧ್ಯಾನಿಸಬೇಕೆಂದು ಮುಂಡಕಶ್ರುತಿಯೂ (೨, ೨, ೬) ಹೇಳುತ್ತವೆ.

ಎರಡನೆಯ ಬ್ರಾಹ್ಮಣದಲ್ಲಿ ದಮ, ದಾನ, ದಯೆ ಇವುಗಳನ್ನು ಉಪಾಸನೆಗೆ ಅಂಗವಾಗಿ ವಿಧಿಸಿದೆ. ಹೃದಯದಲ್ಲಿರುವ ಬುದ್ಧಿಯನ್ನು ಮೂರನೆಯ ಬ್ರಾಹ್ಮಣವು ಸ್ತುತಿಸುತ್ತದೆ. ಬುದ್ಧಿಯು ನಾಮ-ರೂಪ-ಕರ್ಮಗಳ ಪ್ರತಿಷ್ಠೆಯೆಂದೂ ಸರ್ವಪ್ರಾಣಿಗಳ ಆತ್ಮವೆಂದೂ ಹೇಳಲ್ಪಟ್ಟಿದೆ.

ಹೃದಯಬ್ರಹ್ಮವು ಸತ್ಯವು ಎಂಬ ಉಪಾಸನೆಯನ್ನು ವಿಧಿಸಲು ನಾಲ್ಕನೆಯ ಬ್ರಾಹ್ಮಣವು ಬಂದಿದೆ. ಐದನೆಯ ಬ್ರಾಹ್ಮಣವು ಸತ್ಯಬ್ರಹ್ಮವನ್ನು ಸ್ತುತಿಸುತ್ತದೆ ಮತ್ತು ಅದರ ಶರೀರಭಾಗಗಳಲ್ಲಿ ಉಪಾಸನೆಯನ್ನು ಹೇಳುತ್ತದೆ. ಆದಿತ್ಯಮಂಡಲದಲ್ಲಿರುವ ಪುರುಷನೂ ಅಕ್ಷಿಪುರುಷನೆಂದು ಹೇಳಲ್ಪಡುವ ಜೀವಾತ್ಮನೂ ಸತ್ಯಬ್ರಹ್ಮದ ಆಕಾರವಿಶೇಷಗಳೇ. ಜೀವಾತ್ಮನು ಉತ್ಕ್ರಮಿಸುವ ಕಾಲದಲ್ಲಿ, ಆದಿತ್ಯಪುರುಷನ ಅನುಗ್ರಹವು ನಿಂತಾಗ, ಆದಿತ್ಯಮಂಡಲವನ್ನು ರಶ್ಮಿಹೀನವಾದಂತೆ ನೋಡುತ್ತಾನೆ. ಬ್ರಹ್ಮಕ್ಕೆ ಅನೇಕ ವಿಶೇಷಣಗಳೂ ಉಪಾಧಿಗಳೂ ಇರುವುದರಿಂದ ಅದು ಮನಸ್ಸೆಂಬ ಉಪಾಧಿಯಿಂದ ವಿಶಿಷ್ಟವಾಗಿರುವಂತೆ ಉಪಾಸನೆಯನ್ನು ವಿಧಿಸಲು ಆರನೆಯ ಬ್ರಾಹ್ಮಣವು ಬಂದಿದೆ. ವಿದ್ಯುತ್ತು, ವಾಗ್ಧೇನು, ಜಾಠರಾಗ್ನಿ—ಇವೆಲ್ಲ ಬ್ರಹ್ಮವು ಎಂಬ ಉಪಾಸನೆಗಳನ್ನು ವಿಧಿಸಲು ಏಳನೆಯ ಎಂಟನೆಯ ಮತ್ತು ಒಂಬತ್ತನೆಯ ಬ್ರಾಹ್ಮಣಗಳು ಬಂದಿವೆ. ಹಿಂದೆ ವಿವರಿಸಿದ ಉಪಾಸನೆಗಳನ್ನು ಅರಿತುಕೊಂಡವನು ಹೋಗುವ ದಾರಿಯನ್ನೂ ಮತ್ತು ಹೊಂದುವ ಫಲವನ್ನೂ ಹತ್ತನೆಯ ಬ್ರಾಹ್ಮಣದಲ್ಲಿ ಹೇಳಿದೆ: ಇವರು ಬ್ರಹ್ಮಲೋಕದಲ್ಲಿ ಪ್ರಜಾಪತಿಯ ಜೀವಮಾನದವರೆಗೂ ಇರುತ್ತಾರೆ. ಜ್ವರವೇ ಮೊದಲಾದುವನ್ನು ಅಥವಾ ತನ್ನ ಶರೀರವನ್ನು ದಹನಕ್ರಿಯೆಗಾಗಿ ಒಯ್ಯುವುದನ್ನು ಮನುಷ್ಯನು ತಪಸ್ಸೆಂದು ಭಾವಿಸಬೇಕೆಂದು ಹನ್ನೊಂದನೆಯ ಬ್ರಾಹ್ಮಣವು ಉಪದೇಶಿಸುತ್ತದೆ. ಅನ್ನ-ಪ್ರಾಣಗಳನ್ನು ಬ್ರಹ್ಮವೆಂದು ಉಪಾಸಿಸಬೇಕೆಂದು ಹನ್ನೆರಡನೆಯ ಬ್ರಾಹ್ಮಣದಲ್ಲಿ ವಿಧಿಸಿದೆ. ಪ್ರಾಣವನ್ನು ಉಕ್ಥ, ಯಜುಸ್ಸು, ಸಾಮ ಮತ್ತು ಕ್ಷತ್ರ ಎಂದು ಉಪಾಸನೆ ಮಾಡಬೇಕೆಂದು ಹದಿಮೂರನೆಯ

ಬ್ರಾಹ್ಮಣವು ತಿಳಿಸುತ್ತದೆ. ಬ್ರಹ್ಮವು ಗಾಯತ್ರಿಯೆಂಬ ಉಪಾಧಿಯಿಂದ ವಿಶಿಷ್ಟವಾಗಿರುವಂತೆ ಉಪಾಸನೆಯನ್ನು ವಿಧಿಸಲು ಹದಿನಾಲ್ಕನೆಯ ಬ್ರಾಹ್ಮಣವು ಬಂದಿದೆ : ಗಾಯತ್ರಿಗೆ ನಾಲ್ಕು ಪಾದಗಳಿವೆ—ಭೂಮ್ಯಂತರಿಕ್ಷ-ದ್ಯುಲೋಕಗಳು ಮೊದಲನೆಯ ಪಾದವು : ಋಗ್ಯಜುಸ್ಸಾಮವೇದಗಳು ಎರಡನೆಯ ಪಾದವು : ಪ್ರಾಣಾಪಾನವ್ಯಾನಗಳು ಮೂರನೆಯ ಪಾದವು. ಈ ಮೂರು ಪಾದಗಳು ದೃಶ್ಯವಾಗಿವೆ. ಗಾಯತ್ರಿಯ ತುರೀಯವಾದ ಕಾಣುತ್ತಿರುವ ರಜೋತೀತವಾದ ಪಾದವೇ ಆದಿತ್ಯನು. ಗಾಯತ್ರಿಯ ಮುಖವನ್ನು ಅರಿತುಕೊಂಡು ಉಪಾಸನೆ ಮಾಡುವವನು ಪಾಪವನ್ನೆಲ್ಲ ದಹಿಸಿ ಶುದ್ಧನೂ ಪವಿತ್ರನೂ ಅಜರನೂ ಅಮೃತನೂ ಆಗುವನು. ಕೊನೆಯದಾದ ಹದಿನೈದನೆಯ ಬ್ರಾಹ್ಮಣದಲ್ಲಿ ಜ್ಞಾನಕರ್ಮ-ಸಮುಚ್ಚಯವನ್ನು ಮಾಡಿರುವವನು ಮರಣಕಾಲದಲ್ಲಿ ಆದಿತ್ಯನಿಗೆ ಮಾಡುವ ಪ್ರಾರ್ಥನೆಯಿದೆ. ಈಶಾವಾಸ್ಯೋಪನಿಷತ್ತಿನಲ್ಲಿ ಇವೇ ಮಂತ್ರಗಳಿವೆ.

## ಆರನೆಯ ಅಧ್ಯಾಯ

ಆರನೆಯ ಅಧ್ಯಾಯಕ್ಕೆ ಐದು ಬ್ರಾಹ್ಮಣಗಳಿವೆ. ಪ್ರಾಣವೇ ಜ್ಯೇಷ್ಠವು ಮತ್ತು ಶ್ರೇಷ್ಠವು ಎಂಬುದನ್ನು ಮೊದಲನೆಯ ಬ್ರಾಹ್ಮಣದಲ್ಲಿ ರೂಪಕದ ಮೂಲಕ ಹೇಳಿದೆ: ಒಮ್ಮೆ ವಾಗಾದಿಕರಣಗಳು ತಮ್ಮ ಪ್ರಾಧಾನ್ಯವನ್ನು ಸ್ಥಾಪಿಸಲು ಕಲಹ ಮಾಡುತ್ತ ಬ್ರಹ್ಮನ ಬಳಿಗೆ ಹೋಗಿ 'ನಮ್ಮಲ್ಲಿ ಶ್ರೇಷ್ಠವು ಯಾವುದು ?' ಎಂದು ಪ್ರಶ್ನಿಸಿದುವು 'ನಿಮ್ಮಲ್ಲಿ ಯಾವುದು ಉತ್ಕ್ರಮಿಸಿದರೆ ಈ ಶರೀರವು ಅಶುಚಿಯೆಂದು ಜನರು ಎಣಿಸುತ್ತಾರೆಯೊ ಅದೇ ನಿಮ್ಮಲ್ಲಿ ಶ್ರೇಷ್ಠವು' ಎಂದು ಬ್ರಹ್ಮನು ಹೇಳಿದನು. ಆಗ ವಾಕ್ಕೇ ಮೊದಲಾದ ಇಂದ್ರಿಯಗಳು ತಮ್ಮ ಶ್ರೇಷ್ಠತ್ವವನ್ನು ಸ್ಥಾಪಿಸಲು ಶರೀರದಿಂದ ಒಂದೊಂವಾಗಿ ಹೊರಟವು ; ಆದರೆ ಶರೀರವು ಮೊದಲಿಗಿಂತ ಹೆಚ್ಚಾಗಿ ಕೆಡಲಿಲ್ಲ ಕೊನೆಗೆ ಮುಖ್ಯಪ್ರಾಣವು ಉತ್ಕ್ರಮಿಸಲು ಸಿದ್ಧವಾದಾಗ ಇಂದ್ರಿಯಗಳೆಲ್ಲ ತಮ್ಮ ತಮ್ಮ ಸ್ಥಾನಗಳಿಂದ ಕಿತ್ತುಹಾಕಲ್ಪಟ್ಟವು. ಆಗ ಇಂದ್ರಿಯಗಳು ಪ್ರಾಣವನ್ನು ಶರೀರದಿಂದ ಉತ್ಕ್ರಮಿಸಕೂಡದೆಂದು ಬೇಡಿಕೊಂಡು ಅದಕ್ಕೆ ಕಾಣಿಕೆಯನ್ನು ಒಪ್ಪಿಸಿದುವು

ಪಂಚಾಗ್ನಿವಿದ್ಯೆಯನ್ನೂ ಸಂಸಾರಗತಿಗಳನ್ನೂ ಎರಡನೆಯ ಬ್ರಾಹ್ಮಣದಲ್ಲಿ ವಿವರಿಸಿದೆ. ಉತ್ತರಮಾರ್ಗದಲ್ಲಿ (ಅಥವಾ ಅರ್ಚಿರಾದಿಮಾರ್ಗದಲ್ಲಿ) ಹೋಗಲು ಸಾಧನವಾದ ಪಂಚಾಗ್ನಿವಿದ್ಯೆಯನ್ನು ಉಪದೇಶಿಸಲು ಈ ಆಖ್ಯಾಯಿಕೆಯು ಬಂದಿದೆ. ಶ್ವೇತಕೇತುವು ತನ್ನ ಪಾಂಡಿತ್ಯವನ್ನು ಪ್ರದರ್ಶಿಸಲು ಪ್ರವಾಹಣರಾಜನ ಸಭೆಗೆ ಹೋಗುತ್ತಾನೆ. ರಾಜನು ಇವನಿಗೆ ಐದು ಪ್ರಶ್ನೆಗಳನ್ನು ಹಾಕುತ್ತಾನೆ. ಮೃತರಾದ ಮೇಲೆ ಮನುಷ್ಯರು ಬೇರೆ ಬೇರೆ ಮಾರ್ಗಗಳಲ್ಲಿ ಹೇಗೆ ಹೋಗುತ್ತಾರೆ? ಅವರು ಈ ಲೋಕಕ್ಕೆ ಹೇಗೆ ಹಿಂತಿರುಗುವರು? ಇಲ್ಲಿ ಬಹುಜನರು ಪುನಃ ಪುನಃ ಸಾಯುತ್ತಿದ್ದರೂ ಪರಲೋಕವು ಏಕೆ ಪೂರ್ಣವಾಗುವುದಿಲ್ಲ? ಎಷ್ಟನೆಯ ಆಹುತಿಯನ್ನು ಹೋಮಮಾಡಿದ ಮೇಲೆ ನೀರು ಪುರುಷವಾಕ್ಕಾಗಿ ಎದ್ದು ನಿಂತು ಮಾತಾಡುತ್ತದೆ? ದೇವಯಾನ-ಪಿತೃಯಾಣಗಳನ್ನು ಹೇಗೆ ಪಡೆಯಬಹುದು? ಶ್ವೇತಕೇತುವಿಗೆ ಒಂದು ಪ್ರಶ್ನೆಯ ಉತ್ತರವು ಕೂಡ ತಿಳಿದಿರಲಿಲ್ಲ. ಆಗ ರಾಜನು ಶ್ವೇತಕೇತುವನ್ನು ಅಲ್ಲಿ ವಾಸಮಾಡಲು ಆಹ್ವಾನಿಸಿದನು. ಆದರೆ ಶ್ವೇತಕೇತುವು ಅದಕ್ಕೊಪ್ಪದೆ ತನ್ನ ತಂದೆಯಾದ ಗೌತಮನು ಇದ್ದಲ್ಲಿಗೆ ಅವಸರದಿಂದ ಹಿಂತಿರುಗಿ, ರಾಜನು ಪ್ರಶ್ನಿಸಿದ ವಿಷಯವನ್ನೆಲ್ಲ ತನಗೇಕೆ ಹೇಳಿಕೊಡಲಿಲ್ಲವೆಂದು ತಂದೆಯನ್ನು ಆಕ್ಷೇಪಿಸಿದನು. ತನಗೂ ಕೂಡ ಇದು ತಿಳಿದಿಲ್ಲವೆಂದೂ ತಾವಿಬ್ಬರೂ ರಾಜನಿದ್ದೆಡೆಗೆ ಹೋಗಿ ಈ ವಿದ್ಯೆಯನ್ನು ಕಲಿಯಬೇಕೆಂದೂ ಗೌತಮನು ತನ್ನ ಮಗನಿಗೆ ಸೂಚಿಸಿದನು. ಆದರೆ ಶ್ವೇತಕೇತುವು ಇದಕ್ಕೆ ಒಪ್ಪಲಿಲ್ಲ. ಗೌತಮನು ತಾನೊಬ್ಬನೇ ಹೋಗಿ ಈ ವಿದ್ಯೆಯನ್ನು ಉಪದೇಶಿಸಬೇಕೆಂದು ರಾಜನನ್ನು ಕೇಳಿಕೊಂಡನು. ರಾಜನು ಗೌತಮನ ವಿನಯಕ್ಕೆ ಮೆಚ್ಚಿ ಪಂಚಾಗ್ನಿವಿದ್ಯೆಯನ್ನು ಉಪದೇಶಿಸಿದನು—ದ್ಯುಲೋಕಾಗ್ನಿ, ಪರ್ಜನ್ಯಾಗ್ನಿ, ಈ ಲೋಕವೆಂಬ ಅಗ್ನಿ, ಪುರುಷಶರೀರವೆಂಬ ಅಗ್ನಿ ಮತ್ತು ಯೋಷಾಗ್ನಿ. ಪಂಚಾಗ್ನಿವಿದ್ಯೆಯನ್ನು ಅರಿತುಕೊಂಡ ಗೃಹಸ್ಥರೂ ಶ್ರದ್ಧೆಯಿಂದ ಹಿರಣ್ಯಗರ್ಭನನ್ನು ಉಪಾಸಿಸುವ ವಾನಪ್ರಸ್ಥರೂ ಮತ್ತು ಪರಿವ್ರಾಜಕರೂ ಬ್ರಹ್ಮಲೋಕಕ್ಕೆ ಹೋಗುತ್ತಾರೆ; ಅವರಿಗೆ ಪುನರಾವೃತ್ತಿಯಿಲ್ಲ. ಇದು ದೇವಯಾನ ಅಥವಾ ಉತ್ತರಮಾರ್ಗ. ಆದರೆ ಯಜ್ಞ-ದಾನ-ತಪಸ್ಸುಗಳನ್ನು ಮಾಡುವರು ಪಿತೃಯಾಣದ ಮೂಲಕ

ಜನ್ಮವನ್ನು ಪಡೆಯುತ್ತಾರೆ. ಇವರು ಉತ್ತರಮಾರ್ಗಕ್ಕೆ ಹೋಗುವ ವರೆಗೆ ಅಥವಾ ಸದ್ಯೋಮುಕ್ತಿಯನ್ನು ಹೊಂದುವ ವರೆಗೆ ಸಂಸಾರದಲ್ಲಿ ಚಕ್ರದಂತೆ ಸುತ್ತುತ್ತಿರುತ್ತಾರೆ. ಈ ಎರಡು ಮಾರ್ಗಗಳನ್ನೂ ಅರಿಯದವರು ಕೀಟ ಪತಂಗಾದಿಗಳಾಗಿ ಹುಟ್ಟುತ್ತಾರೆ.

ಮೂರನೆಯ ಬ್ರಾಹ್ಮಣವು ಶ್ರೀಮಂಥಕರ್ಮವನ್ನು ಹೇಳುತ್ತದೆ. ಹಿಂದೆ ಉಪದೇಶಿಸಿರುವ ಪ್ರಾಣೋಪಾಸನೆಯನ್ನು ಬಲ್ಲವನಿಗೆ ಮಾತ್ರ ಇದರಲ್ಲಿ ಅಧಿಕಾರ. ಮಹತ್ವವನ್ನು ಹೊಂದಿ ಅದರ ಮೂಲಕ ಯಜ್ಞಾದಿ ಕರ್ಮಗಳಿಗೆ ಅವಶ್ಯಕವಾದ ಧನಸಂಪಾದನೆಯನ್ನು ಮಾಡಲು ಶ್ರೀಮಂಥವನ್ನು ಮಾಡಬೇಕು. ಅನಂತರ ಈ ವಿದ್ಯೆಯನ್ನು ಉಪದೇಶಿಸಿದ ಆಚಾರ್ಯರ ಪರಂಪರೆಯನ್ನು ಕೊಟ್ಟಿದೆ. ಪ್ರತಿಯೊಬ್ಬ ಆಚಾರ್ಯನೂ 'ಇದನ್ನು ಒಣಗಿದ ಮೋಟು ಮರದ ಮೇಲೆ ಚಿಮುಕಿಸಿದರೂ ಕೊಂಬೆಗಳು ಹುಟ್ಟುವುವು ಮತ್ತು ಎಲೆಗಳು ಚಿಗುರುವುವು' ಎಂದು ತನ್ನ ಶಿಷ್ಯನಿಗೆ ಹೇಳಿ ಶ್ರೀಮಂಥವನ್ನೇ ಸ್ತುತಿಸಿರುತ್ತಾನೆ. ಇದನ್ನು ತನ್ನ ಮಗನಿಗೆ ಅಥವಾ ಶಿಷ್ಯನಿಗೆ ಮಾತ್ರ ಉಪದೇಶಿಸಬೇಕು.

ನಾಲ್ಕನೆಯ ಬ್ರಾಹ್ಮಣದಲ್ಲಿ ಪುತ್ರಮಂಥಕರ್ಮವನ್ನು ವಿವರಿಸಿದೆ. ಯೋಗ್ಯನಾದ ಪುತ್ರನು ತನಗೂ ಮತ್ತು ತನ್ನ ತಂದೆಗೂ ಉತ್ತಮವಾದ ಲೋಕಗಳನ್ನು ಜಯಿಸಿಕೊಳ್ಳುತ್ತಾನೆ. ಅಂಥ ಪುತ್ರನನ್ನು ಪಡೆಯಲು ಈ ಕರ್ಮವು ಸಾಧನವಾಗಿದೆ. ಪ್ರಾಣೋಪಾಸಕನಾಗಿ ಶ್ರೀಮಂಥವನ್ನು ಮಾಡಿರುವವನಿಗೆ ಮಾತ್ರ ಪುತ್ರಮಂಥದಲ್ಲಿ ಅಧಿಕಾರ. ಇಲ್ಲಿ ಶಿಶುಜನನಕ್ಕೆ ಮೊದಲು ಮತ್ತು ಜನನಾನಂತರ ಮಾಡುವ ಕೆಲವು ಸಂಸ್ಕಾರಗಳನ್ನು ಹೇಳಿದೆ.

ಐದನೆಯದಾದ ವಂಶಬ್ರಾಹ್ಮಣವು ಇಡೀ ಉಪನಿಷತ್ತಿನ ಆಚಾರ್ಯವಂಶವನ್ನು—ಹಿರಣ್ಯಗರ್ಭನಿಂದ ಪೌತಿಮಾಷೀಪುತ್ರನ ವರೆಗೆ—ವಿವರಿಸಿದೆ.

ಈ ಮಾಲೆಯಲ್ಲಿ ಪ್ರಕಟವಾಗಿರುವ ಇತರ ಉಪನಿಷತ್ತುಗಳಂತೆ ಇಲ್ಲಿಯೂ ಕೂಡ ತಾತ್ಪರ್ಯ-ಟಿಪ್ಪಣಿಗಳು ಶಾಂಕರಭಾಷ್ಯವನ್ನೇ ಅವಲಂಬಿಸಿವೆ.

**ತಸ್ಮೈ ಬ್ರಹ್ಮಣೇ ನಮಃ**

**ನಮಸ್ತದನುವರ್ತಿಭ್ಯೋ ಗುರುಭ್ಯಃ**

ಶ್ರೀರಾಮಕೃಷ್ಣಾಶ್ರಮ
ಮಂಗಳೂರು
೨೦-೮-೧೯೫೮

ಸ್ವಾಮಿ ಆದಿದೇವಾನಂದ

# ವಿಷಯಸೂಚಿಕೆ

# ಶಾಂತಿಪಾಠ

ಹರಿಃ ಓಮ್

ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಹರಿಃ ಓಮ್

ಅದು (ಪರಬ್ರಹ್ಮವು) ಪೂರ್ಣವು, ಇದು (ವ್ಯಕ್ತವಾದ ಜಗತ್ತು) ಪೂರ್ಣವು. ಪೂರ್ಣದಿಂದ (ಪರಬ್ರಹ್ಮದಿಂದ) ಪೂರ್ಣವು (ಜಗತ್ತು) ಹೊರಟುಬಂದಿದೆ ; ಪೂರ್ಣದ (ಜಗತ್ತಿನ) ಪೂರ್ಣತ್ವವನ್ನು (ಬ್ರಹ್ಮತ್ವವನ್ನು) ತೆಗೆದ ಮೇಲೆ (ಗ್ರಹಿಸಿದ ಮೇಲೆ) ಪೂರ್ಣವೇ (ಪರಬ್ರಹ್ಮವೇ) ಉಳಿಯುತ್ತದೆ

ಓಂ ಶಾಂತಿಃ ಶಾಂತಿಃ ಶಾಂತಿಃ

# ಬೃಹದಾರಣ್ಯಕೋಪನಿಷತ್

## ಮೊದಲನೆಯ ಅಧ್ಯಾಯ

### ಮೊದಲನೆಯ ಬ್ರಾಹ್ಮಣ

**ಓಮ್ । ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ । ಸೂರ್ಯ-
ಶ್ಚಕ್ಷುಃ, ವಾತಃ ಪ್ರಾಣಃ, ವ್ಯಾತ್ತಮಗ್ನಿರ್ವೈಶ್ವಾನರಃ, ಸಂವತ್ಸರ
ಆತ್ಮಾಶ್ವಸ್ಯ ಮೇಧ್ಯಸ್ಯ । ದ್ಯೌಃ ಪೃಷ್ಠಮ್, ಅಂತರಿಕ್ಷಮುದರಂ,
ಪೃಥಿವೀ ಪಾಜಸ್ಯಂ, ದಿಶಃ ಪಾರ್ಶ್ವೇ, ಅವಾಂತರದಿಶಃ ಪರ್ಶವಃ,
ಋತವೋಽಂಗಾನಿ, ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣಿ,
ಅಹೋರಾತ್ರಾಣಿ ಪ್ರತಿಷ್ಠಾಃ, ನಕ್ಷತ್ರಾಣ್ಯಸ್ಥೀನಿ, ನಭೋ ಮಾಂ-
ಸಾನಿ । ಊವಧ್ಯಂ ಸಿಕತಾಃ, ಸಿಂಧವೋ ಗುದಾಃ, ಯಕೃಚ್ಚ
ಕ್ಲೋಮಾನಶ್ಚ ಪರ್ವತಾಃ, ಓಷಧಯಶ್ಚ ವನಸ್ಪತಯಶ್ಚ ಲೋ-
ಮಾನಿ, ಉದ್ಯನ್ ಪೂರ್ವಾರ್ಧಃ, ನಿಮ್ಲೋಚಂಜಘನಾರ್ಧಃ,
ಯದ್ವಿಜೃಂಭತೇ ತದ್ವಿದ್ಯೋತತೇ, ಯದ್ವಿಧೂನುತೇ ತತ್‌ಸ್ತ-
ನಯತಿ, ಯನ್ಮೇಹತಿ ತದ್ವರ್ಷತಿ, ವಾಗೇವಾಸ್ಯ ವಾಕ್ ॥ ೧ ॥**

ಓಮ್. ಮೇಧ್ಯಸ್ಯ ಅಶ್ವಸ್ಯ=ಯಜ್ಞಕ್ಕೆ ಅರ್ಹವಾದ ಕುದುರೆಯ ಶಿರಃ= ತಲೆಯು ಉಷಾಃ ವೈ=ಉಷಸ್ಸು, ಚಕ್ಷುಃ=ಕಣ್ಣು ಸೂರ್ಯಃ=ಸೂರ್ಯನು, ಪ್ರಾಣಃ=ಉಸಿರು ವಾತಃ=ವಾಯುವು, ವ್ಯಾತ್ತಂ=ತೆರೆದ ಬಾಯಿ ವೈಶ್ವಾನರಃ ಅಗ್ನಿಃ=ವೈಶ್ವಾನರನೆಂಬ ಅಗ್ನಿಯು, ಮೇಧ್ಯಸ್ಯ ಅಶ್ವಸ್ಯ=ಯಜ್ಞಕ್ಕೆ ಅರ್ಹವಾದ ಕುದುರೆಯ ಆತ್ಮಾ=ಶರೀರವು ಸಂವತ್ಸರಃ=ಸಂವತ್ಸರವು, ಪೃಷ್ಠಂ=ಬೆನ್ನು ದ್ಯೌಃ= ದ್ಯುಲೋಕವು, ಉದರಂ=ಉದರವು ಅಂತರಿಕ್ಷಂ=ಅಂತರಿಕ್ಷವು, ಪಾಜಸ್ಯಂ [ಪಾದಸ್ಯಂ] =ಗೊರಸು ಪೃಥಿವೀ=ಭೂಮಿಯು, ಪಾರ್ಶ್ವೇ=ಪಕ್ಕಗಳು ದಿಶಃ=ದಿಕ್ಕುಗಳು, ಪರ್ಶವಃ=ಪಕ್ಕೆಲುಬುಗಳು ಅವಾಂತರದಿಶಃ=ಅಂತರ ದಿಕ್ಕುಗಳು, ಅಂಗಾನಿ=ಅಂಗ ಗಳು ಋತವಃ=ಋತುಗಳು, ಪರ್ವಾಣಿ=ಅಸ್ಥಿಸಂಧಿಗಳು ಮಾಸಾಃ ಚ ಅರ್ಧಮಾಸಾಃ ಚ=ಮಾಸಗಳು ಮತ್ತು ಪಕ್ಷಗಳು, ಪ್ರತಿಷ್ಠಾಃ=ಕಾಲುಗಳು ಅಹೋರಾತ್ರಾಣಿ=ಅಹೋ

ರಾತ್ರಿಗಳು, ಅಸ್ಥೀನಿ=ಎಲುಬುಗಳು ನಕ್ಷತ್ರಾಣಿ=ನಕ್ಷತ್ರಗಳು, ಮಾಂಸಾನಿ=ಮಾಂಸಗಳು ನಭಃ=ಆಕಾಶದಲ್ಲಿರುವ [ಮೇಘಗಳು], ಊವಧ್ಯಂ=ಅರ್ಧಜೀರ್ಣವಾದ ಆಹಾರವು ಸಿಕತಾಃ=ಮರಳು, ಗುದಾಃ=ಅಪಧಮನಿ-ಅಭಿಧಮನಿಗಳು ಸಿಂಧವಃ=ನದಿಗಳು, ಯಕೃತ್ ಚ=ಪಿತ್ತ ಜನಕಾಂಗವು ಕ್ಲೋಮಾನಃ ಚ=ಗುಲ್ಮವು ಪರ್ವತಾಃ=ಪರ್ವತಗಳು, ಲೋಮಾನಿ=ಕೂದಲುಗಳು ಓಷಧಯಃ ಚ ವನಸ್ಪತಯಃ ಚ=ಓಷಧಿಗಳು ಮತ್ತು ವನಸ್ಪತಿಗಳು ಪೂರ್ವಾರ್ಧಃ=ಮುಂಭಾಗವು ಉದ್ಯನ್=ಉದಯಿಸುತ್ತಿರುವ [ಸೂರ್ಯನು], ಜಘನಾರ್ಧಃ=ಹಿಂಭಾಗವು ನಿಮ್ಲೋಚನ್=ಅಸ್ತಮಿಸುತ್ತಿರುವ [ಸೂರ್ಯನು], ಯತ್ ವಿಜೃಂಭತೇ=ಅದು ಆಕಳಿಸುವಾಗ ತತ್ ವಿದ್ಯೋತತೇ=ಅದು ಮಿಂಚುವುದು, ಯತ್ ವಿಧೂನುತೇ=ಅದು ಅದಿರುವಾಗ ತತ್ ಸ್ತನಯತಿ=ಅದು ಗುಡುಗುವುದು, ಯತ್ ಮೇಹತಿ=ಮೂತ್ರವಿಸರ್ಜನೆ ಮಾಡುವಾಗ ತತ್ ವರ್ಷತಿ=ಅದು ಮಳೆಗರೆಯುವುದು, ಅಸ್ಯ=ಇದರ ವಾಕ್ ಏವ=ಕೆನೆತವೇ ವಾಕ್=ಉಚ್ಚಾರದ ಧ್ವನಿ.

೧. ಓಮ್. ಯಜ್ಞಕ್ಕೆ ಅರ್ಹವಾದ ಕುದುರೆಯ ತಲೆಯು ಉಷಸ್ಸು[1] ಅದರ ಕಣ್ಣು ಸೂರ್ಯನು,[2] ಅದರ ಉಸಿರು ವಾಯುವು, ಅದರ ತೆರೆದ ಬಾಯಿ ವೈಶ್ವಾನರನೆಂಬ ಅಗ್ನಿಯು.[3] ಯಜ್ಞಕ್ಕೆ ಅರ್ಹವಾದ ಕುದುರೆಯ[4] ಶರೀರವು ಸಂವತ್ಸರವು. ಅದರ ಬೆನ್ನು ದ್ಯುಲೋಕವು, ಅದರ ಉದರವು ಅಂತರಿಕ್ಷವು, ಅದರ ಗೊರಸು ಭೂಮಿಯು, ಅದರ ಪಕ್ಕೆಗಳು ದಿಕ್ಕುಗಳು, ಅದರ ಪಕ್ಕೆಲುಬುಗಳು ಅಂತರ-ದಿಕ್ಕುಗಳು, ಅದರ ಅಂಗಗಳು ಋತುಗಳು, ಅದರ ಅಸ್ಥಿಸಂಧಿಗಳು ಮಾಸಗಳು ಮತ್ತು ಪಕ್ಷಗಳು, ಅದರ ಕಾಲುಗಳು ಅಹೋರಾತ್ರಿಗಳು, ಅದರ ಎಲುಬುಗಳು ನಕ್ಷತ್ರಗಳು, ಅದರ ಮಾಂಸವು ಆಕಾಶದಲ್ಲಿರುವ (ಮೇಘಗಳು). ಅದರ ಅರ್ಧಜೀರ್ಣವಾದ ಆಹಾರವು ಮರಳು, ಅದರ ಅಪಧಮನಿ-ಅಭಿಧಮನಿಗಳು ನದಿಗಳು, ಅದರ ಪಿತ್ತಜನಕಾಂಗವು ಮತ್ತು ಗುಲ್ಮವು ಪರ್ವತಗಳು, ಅದರ ಕೂದಲುಗಳು ಓಷಧಿ-ವನಸ್ಪತಿಗಳು. ಅದರ ಮುಂಭಾಗವು ಉದಯಿಸುತ್ತಿರುವ (ಸೂರ್ಯನು), ಅದರ ಹಿಂಭಾಗವು ಅಸ್ತಮಿಸುತ್ತಿರುವ (ಸೂರ್ಯನು). ಅದರ ಆಕಳಿಕೆ ಮಿಂಚು, ಅದರ ಅದುರುವಿಕೆ ಗುಡುಗು. ಅದರ ಮೂತ್ರವಿಸರ್ಜನೆಯು ಮಳೆ. ಅದರ ಕೆನೆತವೇ ಉಚ್ಚಾರದ ಧ್ವನಿ.[5]

[ವೇದಗಳು ಕರ್ಮಕಾಂಡ ಮತ್ತು ಜ್ಞಾನಕಾಂಡ ಎಂದು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ವೈದಿಕಕರ್ಮಾನುಷ್ಠಾನದಿಂದ ಕೇವಲ ಅನಿತ್ಯಫಲಗಳು ಉಂಟಾ

ಗುತ್ತವೆಯೇ ಹೊರತು ಅಜ್ಞಾನವು ನಾಶವಾಗುವುದಿಲ್ಲ. ಆದುದರಿಂದ ಅವಿದ್ಯೆಯನ್ನು ನಾಶಮಾಡುವ ಬ್ರಹ್ಮಜ್ಞಾನವನ್ನು ಜ್ಞಾನಕಾಂಡವು (ಉಪನಿಷತ್ತುಗಳು) ಪ್ರತಿಪಾದಿಸುತ್ತದೆ.

ಧರ್ಮವೆಂದು ಹೇಳಲ್ಪಡುವ ವೈದಿಕಕರ್ಮವು ಎರಡು ವಿಧವಾಗಿರುತ್ತದೆ: (೧) ಉಪಾಸನಾಪೂರ್ವಕವಾದುದು, (೨) ಕೇವಲವಾದುದು. ಉಪಾಸನಾಪೂರ್ವಕವಾದ ಕರ್ಮವು ದೇವಲೋಕದಿಂದ ಹಿಡಿದು ಬ್ರಹ್ಮಲೋಕದ ವರೆಗೆ ಉಪಾಸಕನನ್ನು ಒಯ್ಯುತ್ತದೆ. ಕೇವಲ ಕರ್ಮದಿಂದ ಪಿತೃಲೋಕಾದಿಪ್ರಾಪ್ತಿಯೆಂಬ ಫಲವು ಉಂಟಾಗುತ್ತದೆ. ಕರ್ಮಗಳಲ್ಲೆಲ್ಲ ಶ್ರೇಷ್ಠವಾದ ಅಶ್ವಮೇಧವು ಹಿರಣ್ಯಗರ್ಭ (ಬ್ರಹ್ಮ)ನೊಂದಿಗೆ ಐಕ್ಯವನ್ನು ಹೊಂದಲು ಸಾಧನವಾಗಿರುತ್ತದೆ. ಆದರೆ ಅಶ್ವಮೇಧದ ಫಲವೂ ಕೂಡ ಅನಿತ್ಯವಾದುದರಿಂದ ಉಪಾಸಕನ ಸಂಸಾರವನ್ನು ತಪ್ಪಿಸಲಾರದು. ಸರ್ವಕರ್ಮಗಳೂ ಸಂಸಾರವಿಷಯವೇ ಎಂದು ಪ್ರದರ್ಶಿಸಿ, ವೈರಾಗ್ಯವನ್ನುಂಟುಮಾಡಲು ಬ್ರಹ್ಮವಿದ್ಯಾಗ್ರಂಥದ ಪ್ರಾರಂಭದಲ್ಲಿ ಅಶ್ವವಿಷಯವಾದ ಉಪಾಸನೆಯನ್ನು ಹೇಳಿದೆ.

ಪ್ರಜಾಪತಿ ಅಥವಾ ಹಿರಣ್ಯಗರ್ಭನು ಅಶ್ವಮೇಧದ ದೇವತೆ. ಈ ಕ್ರತುವಿನಲ್ಲಿ ಮುಖ್ಯವಾಗಿರುವ ಅಶ್ವವನ್ನು ಪ್ರಜಾಪತಿಯೆಂದು ಉಪಾಸಿಸಬೇಕು. ಪ್ರತಿಮಾದಿಗಳಲ್ಲಿ ವಿಷ್ಣುತ್ವವೇ ಮೊದಲಾದುವುಗಳನ್ನು ಹೇಗೆ ನೋಡುತ್ತೇವೆಯೋ ಹಾಗೆಯೇ ಈ ಉಪಾಸನೆಯೂ ಕೂಡ ಇದ್ದರಿಂದ ಕರ್ಮಾಂಗವಾದ ಅಶ್ವಕ್ಕೆ ಸಂಸ್ಕಾರವುಂಟಾಗಿ ಪ್ರಜಾಪತಿಯಾಗುತ್ತದೆ ಅಶ್ವವನ್ನು ಪ್ರಜಾಪತಿಯಾಗಿ ಮಾಡುವುದೆಂದರೆ ಪ್ರಜಾಪತಿರೂಪವಾದ ಕಾಲ-ಲೋಕ-ದೇವತೆಗಳನ್ನು ಪಶುವಿನಲ್ಲಿ ಅಧ್ಯಾರೋಪಿಸುವುದು. ರಾಜರಿಗೆ ಮಾತ್ರ ಅಶ್ವಮೇಧದಲ್ಲಿ ಅಧಿಕಾರವಿದೆ, ಆದರೆ ಅಧಿಕಾರವಿಲ್ಲದವರೂ ಕೂಡ ಈ ಉಪಾಸನೆಯಿಂದ ಅದೇ ಫಲವನ್ನು ಪಡೆಯಬಹುದು. ಅಶ್ವವಿಲ್ಲದಿರುವಾಗ ತನ್ನನ್ನೇ ಅಶ್ವವೆಂದು ಕಲ್ಪಿಸಿಕೊಂಡು ತನ್ನ ಕಲೆಯೇ ಮೊದಲಾದ ಅಂಗಗಳಲ್ಲಿ ಕಾಲಾದಿದೃಷ್ಟಿಯನ್ನು ಅಧ್ಯಾರೋಪಿಸಿ ಪ್ರಜಾಪತಿತ್ವವನ್ನು ಪಡೆಯಬೇಕು, 'ನಾನು ಪ್ರಜಾಪತಿಯಾಗಿದ್ದೇನೆ' ಎಂಬ ಜ್ಞಾನದಿಂದ ಆ ಭಾವವನ್ನು ಹೊಂದಬೇಕು ಎಂದರ್ಥ

[1] ಪ್ರಧಾನಾಂಗವಾದ ತಲೆಯಲ್ಲಿ ಬ್ರಾಹ್ಮಮುಹೂರ್ತವೆಂಬ ದೃಷ್ಟಿಯನ್ನು ಅಧ್ಯಾರೋಪಿಸಬೇಕು; ಹೀಗೆಯೇ ಇತರ ಕಡೆಗಳಲ್ಲಿಯೂ ಅರ್ಥಮಾಡಿಕೊಳ್ಳಬೇಕು.

[2] ಸೂರ್ಯನು ಕಣ್ಣಿನ ಅಧಿದೇವತೆ.

[3] ಅಗ್ನಿಯು ಬಾಯಿಯ ಅಧಿದೇವತೆ.

[4] 'ಯಜ್ಞಕ್ಕೆ ಅರ್ಹವಾದ ಕುದುರೆಯ' ಎಂಬುದನ್ನು ಸರ್ವತ್ರ ಸೇರಿಸಿಕೊಳ್ಳಬೇಕು.

[5] ಇಲ್ಲಿ ಕಲ್ಪನೆಯೇನೂ ಇಲ್ಲ.]

**ಅಹರ್ವಾ ಅಶ್ವಂ ಪುರಸ್ತಾನ್ಮಹಿಮಾನ್ವಜಾಯತ, ತಸ್ಯ ಪೂರ್ವೇ ಸಮುದ್ರೇ ಯೋನಿಃ; ರಾತ್ರಿರೇನಂ ಪಶ್ಚಾನ್ಮಹಿಮಾನ್ವಜಾಯತ, ತಸ್ಯಾಪರೇ ಸಮುದ್ರೇ ಯೋನಿಃ; ಏತೌ ವಾ ಅಶ್ವಂ ಮಹಿಮಾನಾವಭಿತಃ ಸಂಬಭೂವತುಃ। ಹಯೋಭೂತ್ವಾ ದೇವಾನವಹತ್, ವಾಜೀ ಗಂಧರ್ವಾನ್, ಅರ್ವಾಸುರಾನ್, ಅಶ್ವೋ ಮನುಷ್ಯಾನ್; ಸಮುದ್ರ ಏವಾಸ್ಯ ಬಂಧುಃ, ಸಮುದ್ರೋ ಯೋನಿಃ ॥ ೨ ॥ ಇತಿ ಪ್ರಥಮಂ ಬ್ರಾಹ್ಮಣಮ್ ॥**

ಅಹಃ ವೈ=ಹಗಲೇ ಪುರಸ್ತಾತ್=ಮುಂಭಾಗದಲ್ಲಿ ಮಹಿಮಾ=ಮಹಿಮೆಯೆಂಬ ಹೆಸರಿನ ಚಿನ್ನದ ಬಟ್ಟಲಿನ ರೂಪದಲ್ಲಿ ಅಶ್ವಂ ಅನ್ವಜಾಯತ=ಕುದುರೆಯನ್ನು [ಸೂಚಿಸುತ್ತ]ಉತ್ಪನ್ನವಾಯಿತು. ತಸ್ಯ=ಅದರ ಯೋನಿಃ=ಉತ್ಪತ್ತಿಸ್ಥಾನವುಪೂರ್ವೇ ಸಮುದ್ರೇ [ಪೂರ್ವಃ ಸಮುದ್ರಃ]=ಪೂರ್ವಸಮುದ್ರ, ರಾತ್ರಿಃ=ರಾತ್ರಿಯು ಪಶ್ಚಾತ್=ಹಿಂಭಾಗದಲ್ಲಿ ಮಹಿಮಾ=ಮಹಿಮೆಯೆಂಬ ಹೆಸರಿನ ಬೆಳ್ಳಿಯ ಬಟ್ಟಲಿನ ರೂಪದಲ್ಲಿ ಏನಂ ಅನ್ವಜಾತಯ=ಇದನ್ನು [ಸೂಚಿಸುತ್ತ] ಉತ್ಪನ್ನವಾಯಿತು, ತಸ್ಯ=ಅದರ ಯೋನಿಃ=ಉತ್ಪತ್ತಿಸ್ಥಾನವು ಅಪರೇ ಸಮುದ್ರೇ [ಅಪರಃ ಸಮುದ್ರಃ]=ಪಶ್ಚಿಮ ಸಮುದ್ರ, ಏತೌ ವೈ ಮಹಿಮಾನೌ=ಇವೆರಡು ಮಹಿಮೆಗಳೂ ಅಶ್ವಂ ಅಭಿತಃ=ಕುದುರೆಯ ಎರಡು ಕಡೆಗಳಲ್ಲಿಯೂ ಸಂಬಭೂವತುಃ=ಉತ್ಪನ್ನವಾದುವು ಹಯಃ ಭೂತ್ವಾ=ಹಯವಾಗಿ ದೇವಾನ್=ದೇವತೆಗಳನ್ನು ಅವಹತ್=ಹೊತ್ತುಕೊಂಡಿತು ವಾಜೀ=ವಾಜಿಯಾಗಿ ಗಂಧರ್ವಾನ್=ಗಂಧರ್ವರನ್ನು [ಅವಹತ್=ಹೊತ್ತುಕೊಂಡಿತು] ಅರ್ವಾ=ಅರ್ವವಾಗಿ ಅಸುರಾನ್=ಅಸುರರನ್ನು [ಅವಹತ್=ಹೊತ್ತುಕೊಂಡಿತು]. ಅಶ್ವಃ=ಅಶ್ವವಾಗಿ ಮನುಷ್ಯಾನ್=ಮನುಷ್ಯರನ್ನು [ಅವಹತ್=ಹೊತ್ತುಕೊಂಡಿತು] ಸಮುದ್ರಃ ಏವ=ಸಮುದ್ರವೇ ಅಸ್ಯ ಇದರ ಬಂಧುಃ=ಬಂಧು, ಸಮುದ್ರಃ=ಸಮುದ್ರವು ಯೋನಿಃ=ಉತ್ಪತ್ತಿಸ್ಥಾನ.

೨. ಹಗಲೇ ಮುಂಭಾಗದಲ್ಲಿ ಮಹಿಮೆಯೆಂಬ ಹೆಸರಿನ ಚಿನ್ನದ ಬಟ್ಟಲಿನ ರೂಪದಲ್ಲಿ ಕುದುರೆಯನ್ನು (ಸೂಚಿಸುತ್ತ) ಉತ್ಪನ್ನವಾಯಿತು ;[1] ಅದರ ಉತ್ಪತ್ತಿಸ್ಥಾನವು ಪೂರ್ವಸಮುದ್ರ.[2] ರಾತ್ರಿಯು ಹಿಂಭಾಗದದ ಮಹಿಮೆಯೆಂಬ ಹೆಸರಿನ ಬೆಳ್ಳಿಯ ಬಟ್ಟಲಿನ ರೂಪದಲ್ಲಿ ಅಶ್ವವನ್ನು (ಸೂಚಿಸುತ್ತ) ಉತ್ಪನ್ನವಾಯಿತು ;[3] ಅದರ ಉತ್ಪತ್ತಿಸ್ಥಾನವು ಪಶ್ಚಿಮಸಮುದ್ರ.[4] ಇವೆರಡು ಮಹಿಮೆಗಳೂ ಕುದುರೆಯ ಎರಡು ಕಡೆಗಳಲ್ಲಿ ಉತ್ಪನ್ನವಾದುವು.

(ಅದು)ಹಯವಾಗಿ[5] ದೇವತೆಗಳನ್ನೂ, ವಾಜಿಯಾಗಿ ಗಂಧರ್ವರನ್ನೂ, ಅರ್ವವಾಗಿ ಅಸುರರನ್ನೂ, ಅಶ್ವವಾಗಿ ಮನುಷ್ಯರನ್ನೂ ಹೊತ್ತುಕೊಂಡಿತು. ಸಮುದ್ರವೇ[6] ಇದರ ಬಂಧು, ಸಮುದ್ರವು (ಇದರ) ಉತ್ಪತ್ತಿಸ್ಥಾನ.

[ಅಶ್ವಮೇಧದಲ್ಲಿ ಹವನೀಯದ್ರವ್ಯವನ್ನು ಹಾಕಿಡುವುದಕ್ಕಾಗಿ ಚಿನ್ನದಿಂದಲೂ ಮತ್ತು ಬೆಳ್ಳಿಯಿಂದಲೂ ಮಾಡಿದ ಮಹಿಮೆಯೆಂಬ ಹೆಸರಿನ ಎರಡು ಬಟ್ಟಲುಗಳನ್ನು ಕುದುರೆಯ ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ ಇಡುತ್ತಾರೆ. ಮಹತ್ತ್ವವಿರುವುದರಿಂದ ಇವುಗಳಿಗೆ ಮಹಿಮೆಯೆಂಬ ಹೆಸರು ಬಂದಿದೆ. ಇವುಗಳಿಗೆ ಗ್ರಹವೆಂಬ ಬೇರೆ ಹೆಸರೂ ಇದೆ ಈ ಗ್ರಹಗಳನ್ನು ಹಗಲು-ರಾತ್ರಿಗಳೆಂದು ಧ್ಯಾನಿಸಬೇಕು. ಇವುಗಳನ್ನು ಇಡುವ ಸ್ಥಾನಗಳಿಗೆ ಯೋನಿಗಳೆಂದು ಹೆಸರು.

[1] ಹಿಂದೆ ಹೇಳಿದಂತೆ ಇಲ್ಲಿ ಅಶ್ವವೇ ಪ್ರಜಾಪತಿ. ಆದಿತ್ಯಾದಿಸ್ವರೂಪನಾದ ಪ್ರಜಾಪತಿಯು ಹಗಲಿನಿಂದ ಸೂಚಿಸಲ್ಪಡುತ್ತಾನೆ. ಮಹಿಮೆಯೆಂಬ ಚಿನ್ನದ ಬಟ್ಟಲು ಅಶ್ವವನ್ನು ಸೂಚಿಸುತ್ತ ಪ್ರಕಟವಾಯಿತು ಎಂದರ್ಥ.

[2] ಪೂರ್ವಸಮುದ್ರವೆಂದು ಉಪಾಸಿಸಬೇಕು.

[3] ಹಗಲಿಗೂ ಚಿನ್ನಕ್ಕೂ ಸಾದೃಶ್ಯವಿರುವಂತೆ ಬೆಳದಿಂಗಳ ರಾತ್ರಿಗೂ ಬೆಳ್ಳಿಗೂ ಸಾಮ್ಯವಿದೆ.

[4] ಪಶ್ಚಿಮಸಮುದ್ರವೆಂದು ಉಪಾಸಿಸಬೇಕು.

[5] ಹಯವೆಂಬ ಗತಿಕರ್ಮವನ್ನು ತಿಳಿಸುವ 'ಹಿ' ಧಾತುವಿನಿಂದ ಬಂದಿರುತ್ತದೆ; ವಿಶಿಷ್ಟಗತಿಯುಳ್ಳದ್ದು ಎಂದರ್ಥ. ಅಥವಾ ಹಯವೆಂದರೆ ಕುದುರೆಯ ಒಂದು ಜಾತಿ. 'ದೇವತೆಗಳನ್ನು ಹೊತ್ತುಕೊಂಡಿತು' ಎಂದರೆ ಅವರಿಗೆ ದೇವತ್ವವನ್ನು ಕೊಟ್ಟಿತು ಎಂಬ ಅರ್ಥವಾಗಬಹುದು.

[6] ಸಮುದ್ರವೆಂದರೆ ಪರಮಾತ್ಮ; ಇವನೇ ಬಂಧು. ಏಕೆಂದರೆ ಪರಮಾತ್ಮನು ಎಲ್ಲ ವಸ್ತುಗಳಿಗೂ ಆಶ್ರಯನು. ಅಥವಾ ಪ್ರಸಿದ್ಧವಾದ ಸಮುದ್ರವೇ ಅದರ ಯೋನಿ. ತೈತ್ತಿರೀಯಸಂಹಿತೆಯ (೨, ೩, ೧೨) ಪ್ರಕಾರ ಅಶ್ವವು ನೀರಿನಲ್ಲಿ ಹುಟ್ಟಿದೆ.]

## ಎರಡನೆಯ ಬ್ರಾಹ್ಮಣ

**ನೈವೇಹ ಕಿಂಚನಾಗ್ರ ಆಸೀತ್, ಮೃತ್ಯುನೈವೇದಮಾವೃತ-ಮಾಸೀತ್—ಅಶನಾಯಯಾ, ಅಶನಾಯಾ ಹಿ ಮೃತ್ಯುಃ; ತನ್ಮನೋಽಕುರುತ, ಆತ್ಮನ್ವೀ ಸ್ಯಾಮಿತಿ । ಸೋಽರ್ಚನ್ನಚರತ್, ತಸ್ಯಾರ್ಚತ ಆಪೋಽಜಾಯಂತ, ಅರ್ಚತೇ ವೈ ಮೇ ಕಮಭೂ-ದಿತಿ, ತದೇವಾರ್ಕಸ್ಯಾರ್ಕತ್ವಂ; ಕಂ ಹ ವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ ॥ ೧ ॥**

ಇಹ=ಇಲ್ಲಿ ಅಗ್ರೇ=ಮೊದಲು ಕಿಂಚನ ನ ಏವ ಆಸೀತ್=ಯಾವುದೂ ಇರಲಿಲ್ಲ. ಇದಂ=ಇದು ಅಶನಾಯಯಾ=ಭೋಜನೇಚ್ಛೆಯುಳ್ಳ ಮೃತ್ಯುನಾ ಏವ= ಮೃತ್ಯುವಿನಿಂದಲೇ ಆವೃತಂ ಆಸೀತ್=ಆವೃತ್ತವಾಗಿತ್ತು ; ಹಿ=ಏಕೆಂದರೆ ಅಶನಾಯ=ಹಸಿವು ಮೃತ್ಯುಃ=ಮೃತ್ಯುವು. ಆತ್ಮನ್ವೀ ಸ್ಯಾಂ=ನಾನು ಮನಸುಳ್ಳವನಾಗಲಿ, ಇತಿ=ಎಂದು [ಸಃ=ಅವನು] ತತ್ ಮನಃ=ಅಂತಹ ಮನಸ್ಸನ್ನು ಅಕುರುತ=ಸೃಷ್ಟಿಸಿದನು. ಸಃ=ಅವನು ಅರ್ಚನ್=[ತನ್ನನ್ನೇ] ಪೂಜಿಸಿಕೊಳ್ಳುತ್ತ ಅಚರತ್ ಸಂಚರಿಸಿದನು ಅರ್ಚತಃ ಅಸ್ಯ=ಪೂಜಿಸುತ್ತಿರುವ ಅವನಿಗೆ ಆಪಃ=ನೀರು ಅಜಾಯಂತ= ಉತ್ಪನ್ನವಾಯಿತು ಅರ್ಚತೇ ಮೇ=ಪೂಜಿಸುತ್ತಿರುವ ನನಗೆ ಕಂ ವೈ=ನೀರು ಅಭೂತ್=ಉತ್ಪನ್ನವಾಯಿತು ಇತಿ=ಎಂದು [ಏವಂ ಅಮನ್ಯತ=ಹೀಗೆ ಯೋಚಿಸಿದನು] ; ತತ್ ಏವ=ಆದುದರಿಂದಲೇ ಅರ್ಕಸ್ಯ=ಅಗ್ನಿಗೆ ಅರ್ಕತ್ವಂ=ಅರ್ಕತ್ವವು [ಉಂಟಾಯಿತು]. ಯ=ಯಾವನು ಏವಂ=ಹೀಗೆ ಅರ್ಕಸ್ಯ=ಅಗ್ನಿಯ ಏತತ್= ಅರ್ಕತ್ವಂ=ಈ ಅರ್ಕತ್ವವನ್ನು ವೇದ=ಅರಿಯುವನೋ ಅಸ್ಮೈ=ಅವನಿಗೆ ಕಂ ಹ ವೈ=ನೀರೇ ಭವತಿ ಆಗುವುದು.

ಇಲ್ಲಿ[1] ಮೊದಲು[2] ಯಾವುದೂ[3] ಇರಲಿಲ್ಲ. ಇದು ಭೋಜನೇಚ್ಛೆಯುಳ್ಳ[4] ಮೃತ್ಯುವಿನಿಂದಲೇ[5] ಆವೃತ್ತವಾಗಿತ್ತು ;[6] ಏಕೆಂದರೆ ಹಸಿವೇ ಮೃತ್ಯುವು. 'ನಾನು ಮನಸ್ಸುಳ್ಳವನಾಗಲಿ' ಎಂದು (ಅವನು) ಅಂತಹ[7] ಮನಸ್ಸನ್ನು[8] ಸೃಷ್ಟಿಸಿದನು. ಅವನು (ತನ್ನನ್ನೇ) ಪೂಜಿಸಿಕೊಳ್ಳುತ್ತ[9] ಸಂಚರಿಸಿದನು. ಪೂಜಿಸುತ್ತಿರುವ ಅವನಿಗೆ ನೀರು[10] ಉತ್ಪನ್ನವಾಯಿತು. 'ಪೂಜಿಸುತ್ತಿರುವ ನನಗೆ ನೀರು ಉತ್ಪನ್ನವಾಯಿತು' ಎಂದು (ಹೀಗೆ ಯೋಚಿಸಿದನು) ; ಆದುದರಿಂದಲೇ ಅಗ್ನಿಗೆ[11] ಅರ್ಕತ್ವವು[12] (ಉಂಟಾಯಿತು).

ಯಾವನು ಹೀಗೆ ಅಗ್ನಿಯ ಈ ಅರ್ಕತ್ವವನ್ನು ಅರಿಯುವನೋ ಅವನಿಗೆ ನೀರೇ[13] ಆಗುವುದು.

[ಇಲ್ಲಿ ಅಶ್ವಮೇಧಕ್ಕೆ ಉಪಯೋಗಿಸುವ ಅಗ್ನಿಯ ಉತ್ಪತ್ತಿಯನ್ನು ಹೇಳಿದೆ. ಅದರ ವಿಷಯವಾದ ಉಪಾಸನೆಯನ್ನು ಹೇಳಲು ಮತ್ತು ಸ್ತುತಿಸಲು ಉತ್ಪತ್ತಿಯನ್ನು ಹೇಳಿದೆ.

1 ಜಗತ್ತಿನಲ್ಲಿ.

2 ಮನಸ್ಸು ಮೊದಲಾದುವುಗಳ ಉತ್ಪತ್ತಿಗೆ ಮೊದಲು

3 ನಾಮರೂಪಗಳಿಂದ ಭಿನ್ನವಾದ.

4 ಇದು ಮೃತ್ಯುವಿನ ಲಕ್ಷಣ.

5 ಬುದ್ಧಿಯಲ್ಲಿ ಅವಸ್ಥಿತನಾದ ಹಿರಣ್ಯಗರ್ಭ.

6 ಪಿಂಡಾವಸ್ಥೆಯಲ್ಲಿರುವ ಮಣ್ಣಿನಿಂದ ಘಟಾದಿಗಳು ಆವೃತವಾಗಿರುವಂತೆ ಕಾರ್ಯವಾದ ಈ ಜಗತ್ತು ಮೃತ್ಯುವಿನಿಂದ ಆವೃತ್ತವಾಗಿತ್ತು.

7 ಕಾರ್ಯಾಲೋಚನಸಮರ್ಥವಾದ.

8 ಸಂಕಲ್ಪಾದಿಲಕ್ಷಣವುಳ್ಳ ಅಂತಃಕರಣವನ್ನು.

9 'ನಾನು ಕೃತಾರ್ಥನಾದೆನು' ಎಂದು.

10 ಪೂಜಾಂಗಭೂತವೂ ರಸಾತ್ಮಕವೂ ಆದ ನೀರು, ಆಕಾಶ, ವಾಯು, ಅಗ್ನಿ ಇವುಗಳು ಹುಟ್ಟಿದ ಬಳಿಕ ಎಂದು ತಿಳಿದುಕೊಳ್ಳಬೇಕು.

11 ಅಶ್ವಮೇಧಕ್ರತುವಿಗೆ ಉಪಯೋಗಿಸುವ ಅಗ್ನಿಗೆ.

12 ಇದು ಅಗ್ನಿಗೆ ಬಂದಿರುವ ಅರ್ಕಪದದ ನಿರ್ವಚನ. ಸುಖಕ್ಕೆ ಕಾರಣವಾದ ಪೂಜೆಯನ್ನು ಮಾಡುವುದರಿಂದಲೂ ಮತ್ತು ನೀರಿನ ಸಂಬಂಧದಿಂದಲೂ ಅಗ್ನಿಗೆ ಅರ್ಕವೆಂಬ ಗೌಣನಾಮವು ಬಂದಿರುತ್ತದೆ.

13 ಅಥವಾ ಸುಖವು.]

**ಆಪೋ ವಾ ಅರ್ಕ; ತದ್ಯದಪಾಂ ಶರ ಆಸೀತ್ ತತ್ ಸಮ-ಹನ್ಯತ। ಸಾ ಪೃಥಿವ್ಯಭವತ್; ತಸ್ಯಾಮಶ್ರಾಮ್ಯತ್; ತಸ್ಯ ಶ್ರಾಂತಸ್ಯ ತಪ್ತಸ್ಯ ತೇಜೋರಸೋ ನಿರವರ್ತತಾಗ್ನಿಃ ॥ ೨ ॥**

ಆಪಃ ವೈ=ನೀರೇ ಅರ್ಕಃ=ಅರ್ಕ. ತತ್ [ತತ್ರ]=ಅಲ್ಲಿ ಯತ್=ಯಾವುದು ಅಪಾಂ=ನೀರಿನ ಶರಃ ಆಸೀತ್=ಗರಣೆಯಂತಿದ್ದಿತೋ ತತ್=ಅದು ಸಮಹನ್ಯತ=ಗಟ್ಟಿಯಾಯಿತು; ಸಾ ಪೃಥಿವೀ=ಆ ಪೃಥ್ವಿಯು ಅಭವತ್=ಆಯಿತು ತಸ್ಯಾಂ-

[ಪೃಥಿವ್ಯಾಂ ಉತ್ಪಾದಿತಾಯಾಂ]=ಆ [ಪೃಥ್ವಿಯು ಸೃಷ್ಟಿಯಾದ ಮೇಲೆ] [ಪ್ರಜಾಪತಿಃ=ಪ್ರಜಾಪತಿಯು] ಅಶ್ರಾಮ್ಯತ್=ಶ್ರಮವನ್ನು ಹೊಂದಿದನು. ಶ್ರಾಂತಸ್ಯ=ಶ್ರಾಂತನಾದ ತಪ್ತಸ್ಯ=ಖಿನ್ನನಾದ ತಸ್ಯ=ಅವನಿಂದ ತೇಜೋರಸಃ=ತೇಜೋರೂಪವಾದರಸವು ನಿರವರ್ತತ=ಹೊರಬಂದಿತು. [ಅಯಂ] ಅಗ್ನಿಃ=[ಇದೇ] ಅಗ್ನಿ.

೨. ನೀರೇ ಅರ್ಕ.[1] ಅಲ್ಲಿ ಯಾವುದು ನೀರಿನ ಗರಣೆಯಂತಿದ್ದಿತೊ ಅದು ಗಟ್ಟಿಯಾಯಿತು; (ಅದು) ಆ ಪೃಥ್ವಿಯಾಯಿತು.[2] ಆ (ಪೃಥ್ವಿಯು ಸೃಷ್ಟಿಯಾದ ಮೇಲೆ) ಪ್ರಜಾಪತಿಯು ಶ್ರಮವನ್ನು ಹೊಂದಿದನು. ಶ್ರಾಂತನೂ ಖಿನ್ನನೂ ಆದ ಅವನಿಂದ ತೇಜೋರೂಪವಾದ ರಸವು ಹೊರಬಂದಿತು. (ಇದೇ) ಅಗ್ನಿ.[3]

[[1] ಅರ್ಕನಾದ ಅಗ್ನಿಗೆ ಕಾರಣವಾಗಿರುವುದರಿಂದಲೂ ನೀರಿನಲ್ಲಿ ಅಗ್ನಿಯು ಇರುವುದರಿಂದಲೂ ಅರ್ಚನೆಗೆ ಅಂಗವಾದ ನೀರನ್ನೇ ಇಲ್ಲಿ ಅರ್ಕವೆಂದು ಪರೋಕ್ಷವಾಗಿ ಹೇಳಿದೆ.

[2] ಬ್ರಹ್ಮಾಂಡ.

[3] ಕಾರ್ಯಕರಣಸಂಘಾತದಿಂದ ಕೂಡಿದ ವಿರಾಟ್ಪುರುಷ. ಇವನೇ ಪ್ರಥಮ ಶರೀರಿ; ಸ ವೈ ಶರೀರೀ ಪ್ರಥಮಃ ಎಂದು ಸ್ಮೃತಿಯು ಹೇಳುತ್ತದೆ.]

**ಸ ತ್ರೇಧಾತ್ಮಾನಂ ವ್ಯಕುರುತ, ಆದಿತ್ಯಂ ತೃತೀಯಂ, ವಾಯುಂ ತೃತೀಯಂ; ಸ ಏಷ ಪ್ರಾಣಸ್ತ್ರೇಧಾ ವಿಹಿತಃ। ತಸ್ಯ ಪ್ರಾಚೀ ದಿಕ್ ಶಿರಃ, ಅಸೌ ಚಾಸೌ ಚೇರ್ಮೌ। ಅಥಾಸ್ಯ ಪ್ರತೀಚೀ ದಿಕ್ ಪುಚ್ಛಮ್, ಅಸೌ ಚಾಸೌ ಚ ಸಕ್ಥ್ಯೌ, ದಕ್ಷಿಣಾ ಚೋದೀಚೀ ಚ ಪಾರ್ಶ್ವೇ, ದ್ಯೌಃ ಪೃಷ್ಠಮ್, ಅಂತರಿಕ್ಷಮುದರಮ್ ಇಯಮುರಃ; ಸ ಏಷೋಽಪ್ಸು ಪ್ರತಿಷ್ಠಿತಃ; ಯತ್ರ ಕ್ವ ಚೈತಿ ತದೇವ ಪ್ರತಿತಿಷ್ಠತ್ಯೇವಂ ವಿದ್ವಾನ್ ॥ ೩ ॥**

ಸಃ=ಅವನು ಆತ್ಮಾನಂ=ತನ್ನನ್ನು ತ್ರೇಧಾ=ಮೂರು ವಿಧವಾಗಿ ವ್ಯಕುರುತ=ವಿಂಗಡಿಸಿಕೊಂಡನು—ಆದಿತ್ಯಂ=ಆದಿತ್ಯನನ್ನು ತೃತೀಯಂ=ಮೂರನೆಯವನನ್ನಾಗಿ, ವಾಯುಂ=ವಾಯುವನ್ನು ತೃತೀಯಂ=ಮೂರನೆಯವನನ್ನಾಗಿ ಸಃ ಏಷಃ ಪ್ರಾಣಃ=ಆ ಈ ಪ್ರಾಣನು ತ್ರೇಧಾ=ಮೂರು ವಿಧವಾಗಿ ವಿಹಿತಃ=ವಿಂಗಡಿಸಲ್ಪಟ್ಟಿದ್ದಾನೆ. ತಸ್ಯ=ಅವನ ಶಿರಃ=ತಲೆಯ ಪ್ರಾಚೀದಿಕ್=ಪೂರ್ವದಿಕ್ಕು, ಇರ್ಮೌ=ಎರಡು ಬಾಹು

ಗಳು ಅಸೌ ಚ ಅಸೌ ಚ=ಇದು ಮತ್ತು ಇದು. ಅಥ=ಇನ್ನು ಅಸ್ಯ=ಇವನ ಪುಚ್ಛಂ=ಹಿಂಭಾಗವು ಪ್ರತೀಚೀ ದಿಕ್=ಪಶ್ಚಿಮ ದಿಕ್ಕು, ಸಕ್ಥ್ಯೌ=ಕಟಿ ಪ್ರದೇಶದ ಎರಡು ಎಲುಬುಗಳು ಅಸೌ ಚ ಅಸೌ ಚ=ಇದು ಮತ್ತು ಇದು, ಪಾರ್ಶ್ವೇ=ಎರಡು ಪಕ್ಕೆಗಳು ದಕ್ಷಿಣಾ ಚ ಉದೀಚೀ ಚ=ದಕ್ಷಿಣ ಮತ್ತು ಉತ್ತರ [ದಿಕ್ಕುಗಳು], ಪೃಷ್ಠಂ=ಬೆನ್ನು ದ್ಯೌಃ=ದ್ಯುಲೋಕ, ಉದರಂ=ಉದರವು ಅಂತರಿಕ್ಷಂ=ಅಂತರಿಕ್ಷವು, ಉರಃ=ಎದೆಯು ಇಯಂ=ಈ [ಪೃಥಿವಿ]; ಸಃ ಏಷಃ=ಆ ಇವನು ಅಪ್ಸು=ನೀರಿನಲ್ಲಿ ಪ್ರತಿಷ್ಠಿತಃ=ಪ್ರತಿಷ್ಠಿತನಾಗಿರುವನು; ಏವಂ=ಹೀಗೆ ವಿದ್ವಾನ್=ತಿಳಿದವನು ಯತ್ರ ಕ್ವ ಚ ಏತಿ=ಎಲ್ಲಿಗೆ ಹೋದರೂ ತತ್ ಏವ=ಅಲ್ಲಿಯೇ ಪ್ರತಿತಿಷ್ಠತಿ=ಪ್ರತಿಷ್ಠೆಯನ್ನು ಪಡೆಯುತ್ತಾನೆ.

೩. ಅವನು[1] ತನ್ನನ್ನು[2] ಮೂರು ವಿಧವಾಗಿ ವಿಂಗಡಿಸಿಕೊಂಡನು—ಆದಿತ್ಯನು[3] ಅವನ ಮೂರನೆಯ ಒಂದಂಶ, ವಾಯುವು[4] ಅವನ ಮೂರನೆಯ ಒಂದಂಶ. (ಹೀಗೆ) ಆ ಈ ಪ್ರಾಣನು ಮೂರು ವಿಧವಾಗಿ ವಿಂಗಡಿಸಲ್ಪಟ್ಟಿದ್ದಾನೆ. ಅವನ[5] ತಲೆಯು ಪೂರ್ವದಿಕ್ಕು ಮತ್ತು ಬಾಹುಗಳು ಇದು ಮತ್ತು ಇದು.[6] ಇನ್ನು ಇವನ ಹಿಂಭಾಗವು ಪಶ್ಚಿಮದಿಕ್ಕು, ಕಟಿಪ್ರದೇಶದ ಎರಡು ಎಲುಬುಗಳು ಇದು ಮತ್ತು ಇದು,[7] ಎರಡು ಪಕ್ಕೆಗಳು ದಕ್ಷಿಣ ಮತ್ತು ಉತ್ತರ (ದಿಕ್ಕುಗಳು), ಬೆನ್ನು ದ್ಯುಲೋಕವು, ಉದರವು ಅಂತರಿಕ್ಷವು, ಎದೆಯು (ಈ ಪೃಥಿವಿ); ಆ ಇವನು[8] ನೀರಿನಲ್ಲಿ ಪ್ರತಿಷ್ಠಿತನಾಗಿರುವನು. ಯಾವನು (ಇದನ್ನು) ಹೀಗೆ ತಿಳಿಯುವನೊ[9] ಅವನು ಎಲ್ಲಿಗೆ ಹೋದರೂ ಅಲ್ಲಿಯೇ ಪ್ರತಿಷ್ಠೆಯನ್ನು ಪಡೆಯುತ್ತಾನೆ.[10]

[ವಿರಾಟ್ಪುರುಷನನ್ನು ಉಪಾಸಿಸಲು ಅವನ ಮೂರು ಅಂಶಗಳನ್ನು ಅಥವಾ ಭಾಗಗಳನ್ನು ಇಲ್ಲಿ ಹೇಳಿದೆ.

1 ವಿರಾಟ್ಪುರುಷನು.

2 ದೇಹೇಂದ್ರಿಯಗಳ ಸಂಘಾತವನ್ನು.

3 ಅಗ್ನಿ, ವಾಯುಗಳ ಅಪೇಕ್ಷೆಯಿಂದ.

4 ಅಗ್ನಿ, ಆದಿತ್ಯ—ಇವರ ಅಪೇಕ್ಷೆಯಿಂದ. ಹೀಗೆಯೇ ವಾಯು, ಆದಿತ್ಯ ಇವರ ಅಪೇಕ್ಷೆಯಿಂದ ಅಗ್ನಿಯು ಅವನ ಮೂರನೆಯ ಒಂದಂಶ ಎಂದು ಅಧ್ಯಾಹಾರಮಾಡಿ ಕೊಳ್ಳಬೇಕು.

5 ಈಗ ಅಶ್ವಮೇಧದಲ್ಲಿ ಉಪಯೋಗಿಸಲ್ಪಡುವವನೂ ಚಿತ್ಯಾತ್ಮಕನೂ ಆದ ಅಗ್ನಿಯ (ಪ್ರಥಮಶರೀರಿಯಾದ ವಿರಾಟ್ಪುರುಷನ ಅಥವಾ ಅರ್ಕನ) ಉಪಾಸನೆಯು ಅಶ್ವೋಪಾಸನೆಯಂತೆಯೇ ಹೇಳಲ್ಪಡುವುದು.

6 ಈಶಾನ್ಯ ಮತ್ತು ಆಗ್ನೇಯ.

7 ವಾಯವ್ಯ–ನೈಋತ್ಯ ದಿಕ್ಕುಗಳು.

8 ಪ್ರಜಾಪತಿಯ ರೂಪದಲ್ಲಿರುವವನೂ ಲೋಕವೇ ಮೊದಲಾದುವುಗಳ ಆತ್ಮನೂ.

9 'ಅಗ್ನಿಯು ನೀರಿನಲ್ಲಿ ಪ್ರತಿಷ್ಠಿತವಾಗಿದೆ' ಎಂದು ಅರಿತವನು.

10 ಇದು ಗೌಣ; ಮೃತ್ಯುಜಯವೇ ಮುಖ್ಯ ಫಲವೆಂದು ಮುಂದೆ ೧, ೨, ೭ರಲ್ಲಿ ಹೇಳಿದೆ ]

**ಸೋಽಕಾಮಯತ, ದ್ವಿತೀಯೋ ಮ ಆತ್ಮಾ ಜಾಯೇತೇತಿ; ಸ ಮನಸಾ ವಾಚಂ ಮಿಥುನಂ ಸಮಭವದಶನಾಯಾ ಮೃತ್ಯುಃ; ತದ್ಯದ್ರೇತ ಆಸೀತ್ ಸ ಸಂವತ್ಸರೋಽಭವತ್ । ನ ಹ ಪುರಾತಃತ ಸಂವತ್ಸರ ಆಸ; ತಮೇತಾವಂತಂ ಕಾಲಮಬಿಭಃ, ಯಾವಾನ್ ಸಂವತ್ಸರಃ; ತಮೇತಾವತಃ ಕಾಲಸ್ಯ ಪರಸ್ತಾದಸೃಜತ । ತಂ ಜಾತಮಭಿವ್ಯಾದದಾತ್; ಸ ಭಾಣಕರೋತ್, ಸೈವ ವಾಗಭವತ್ ॥೪॥**

ಸಃ=ಅವನು, ಮೃತ್ಯುವು ಅಕಾಮಯತ=ಬಯಸಿದನು : ಮೇ=ನನಗೆ ದ್ವಿತೀಯಃ ಆತ್ಮಾ=ಎರಡನೆಯ ಶರೀರವು ಜಾಯೇತ=ಹುಟ್ಟಲಿ ಇತಿ=ಎಂದು. ಸಃ ಅಶನಾಯ ಮೃತ್ಯುಃ=ಹಸಿವಿನಿಂದ ಲಕ್ಷಿತನಾದ ಆ ಮೃತ್ಯುವು ಮನಸಾ=ಮನಸ್ಸಿನೊಂದಿಗೆ ವಾಚಂ=ವಾಕ್ಕನ್ನು ಮಿಥುನಂ ಸಮಭವತ್=ಸೇರಿಸಿದನು. ತತ್ [ತತ್ರ]=ಆ ಮಿಥುನದಲ್ಲಿ ಯತ್=ಯಾವ ರೇತಃ=ರೇತಸ್ಸು ಆಸೀತ್=ಇತ್ತೋ ಸಃ ಸಂವತ್ಸರಃ ಅಭವತ್=ಅದು ಸಂವತ್ಸರವಾಯಿತು. ತತಃ ಪುರಾ=ಅವನಿಗಿಂತ ಮೊದಲು ಸಂವತ್ಸರಃ=ಸಂವತ್ಸರವು ನ ಹ ಆಸ=ಇರಲಿಲ್ಲ. [ಸಃ=ಅವನು, ಮೃತ್ಯುವು] ತಮ್=ಅವನನ್ನು ಯಾವಾನ್ ಸಂವತ್ಸರಃ=ಒಂದು ಸಂವತ್ಸರವು ಎಷ್ಟಾಗುತ್ತದೆಯೊ ಏತಾವಂತಂ ಕಾಲಂ=ಅಷ್ಟು ಕಾಲ ಅಬಿಭಃ=ಧರಿಸಿದ್ದನು; ಏತಾವತಃ ಕಾಲಸ್ಯ ಪರಸ್ತಾತ್=ಅಷ್ಟು ಕಾಲವು ಕಳೆದ ಬಳಿಕ ತಂ=ಅವನನ್ನು ಅಸೃಜತ=ಸೃಷ್ಟಿಸಿದನು. ಜಾತಂ ತಂ=ಹುಟ್ಟಿದ ಅವನನ್ನು [ಲಕ್ಷಿಸಿ] ಅಭಿವ್ಯಾದದಾತ್=ಬಾಯಿ ತೆರೆದನು. ಸಃ=ಅವನು ಭಾಣ್=ಭಾಣ್ [ಎಂಬ ಶಬ್ದವನ್ನು] ಅಕರೋತ್=ಮಾಡಿದನು, ಸಾ ಏವ=ಅದೇ ವಾಕ್ ಅಭವತ್=ವಾಕ್ಕಾಯಿತು.

೪. 'ನನಗೆ ಎರಡನೆಯ ಶರೀರವು ಹುಟ್ಟಲಿ' ಎಂದು ಮೃತ್ಯುವು ಬಯಸಿದನು. ಹಸಿವಿನಿಂದ ಲಕ್ಷಿತನಾದ ಆ ಮೃತ್ಯುವು ಮನಸ್ಸಿನೊಂದಿಗೆ ವಾಕ್ಕನ್ನು ಸೇರಿಸಿದನು.[1] ಆ ಮಿಥುನದಲ್ಲಿ ಯಾವ ರೇತಸ್ಸಿತ್ತೊ,[2] ಅದು ಸಂವತ್ಸರವಾಯಿತು.[3] ಅವನಿಗಿಂತ ಮೊದಲು ಸಂವತ್ಸರವಿರಲಿಲ್ಲ. ಒಂದು ಸಂವತ್ಸರವು ಎಷ್ಟಾಗುತ್ತದೆಯೊ ಅಷ್ಟು ಕಾಲ (ಮೃತ್ಯುವು) ಅವನನ್ನು ಧರಿಸಿದ್ದನು; ಅಷ್ಟು ಕಾಲವು ಕಳೆದ ಬಳಿಕ ಅವನನ್ನು ಸೃಷ್ಟಿಸಿದನು. ಹುಟ್ಟಿದ ಅವನನ್ನು ಲಕ್ಷಿಸಿ (ಮೃತ್ಯುವು ನಗುವಂತೆ) ಬಾಯಿ ತೆರೆದನು. (ಆಗ) 'ಭಾಣ್' (ಎಂಬ ಶಬ್ದವನ್ನು) ಮಾಡಿದನು.[4] ಅದೇ ವಾಕ್ಕಾಯಿತು.

[ಮೃತ್ಯುವು ನೀರು ಮೊದಲಾದ ಕ್ರಮದಿಂದ ತನ್ನನ್ನು ತಾನೇ ಅಂಡದಲ್ಲಿ–ಶರೀರೇಂದ್ರಿಯಗಳಿಂದ ಕೂಡಿದ ವಿರಾಟ್–ಪ್ರಜಾಪತಿಯ ಅಥವಾ ಅಗ್ನಿಯ ರೂಪದಲ್ಲಿ–ಮೂರು ಬಗೆಯಾಗಿ ಸೃಷ್ಟಿಸಿಕೊಂಡನು ಎಂದು ಹಿಂದೆ ಹೇಳಿದ್ದಾಯಿತು. ಈ ಸೃಷ್ಟಿಯು ಹೇಗೆ ಉಂಟಾಯಿತೆಂದು ಶ್ರುತಿಯು ಇಲ್ಲಿ ತಿಳಿಸುತ್ತದೆ.

[1] ಇಲ್ಲಿ ವಾಕ್ಕೆಂದರೆ ವೇದಗಳು; ವೇದಗಳಲ್ಲಿ ವಿಹಿತವಾಗಿರುವ ಸೃಷ್ಟಿಕರ್ಮವನ್ನು ಆಲೋಚಿಸಿದನು ಎಂದರ್ಥ.

[2] ಪ್ರಜಾಪತಿಯ ಹಿಂದಿನ ಜನ್ಮಗಳಲ್ಲಿ ಸಂಚಿತವಾದ ಜ್ಞಾನ ಮತ್ತು ಕರ್ಮಫಲ; ಇದು ಇವನ ಉತ್ಪತ್ತಿಗೆ ಕಾರಣವಾಗಿದೆ. ಮೃತ್ಯುವು ವೇದಗಳನ್ನು ಆಲೋಚಿಸುತ್ತಿರುವಾಗ ಇದನ್ನೇ ನೋಡಿದನು.

[3] ಸಂವತ್ಸರಕಾಲವನ್ನು ನಿರ್ಮಿಸುವ ಸಂವತ್ಸರನೆಂಬ ಪ್ರಜಾಪತಿಯಾದನು.

[4] ಅವನು ಸ್ವಾಭಾವಿಕವಾದ ಅವಿದ್ಯೆಯಿಂದ ಯುಕ್ತನಾದುದರಿಂದ ಹೆದರಿ ಅಂತಹ ಶಬ್ದವನ್ನು ಮಾಡಿದನು.]

**ಸ ಐಕ್ಷತ, ಯದಿ ವಾ ಇಮಮಭಿಮಂಸ್ಯೇ, ಕನೀಯೋಽನ್ನಂ ಕರಿಷ್ಯ ಇತಿ; ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚ—ಋಚೋ ಯಜೂಂಷಿ ಸಾಮಾನಿ ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ । ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ; ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ; ಸರ್ವಸ್ಯೈತಸ್ಯಾತ್ತಾ ಭವತಿ, ಸರ್ವಮಸ್ಯಾನ್ನಂ ಭವತಿ, ಯ ಏವಮೇತದದಿತೇರದಿತಿತ್ವಂ ವೇದ ॥ ೫ ॥**

ಸಃ=ಅವನು, ಮೃತ್ಯುವು ಐಕ್ಷತ=ಆಲೋಚನೆ ಮಾಡಿದನು—ಇಮಂ= ಇವನನ್ನು ಯದಿ ವೈ ಅಭಿಮಂಸ್ಯೇ=ಕೊಂದರೆ ಕನೀಯಃ ಅನ್ನಂ=ಸ್ವಲ್ಪ ಅನ್ನವನ್ನು [ಮಾತ್ರ] ಕರಿಷ್ಯೇ=ಮಾಡುತ್ತೇನೆ ಇತಿ=ಎಂದು; ಸಃ=ಅವನು ತಯಾ ವಾಚಾ=ಆ ವಾಕ್ಕಿನಿಂದ ತೇನ ಆತ್ಮನಾ=ಆ ಮನಸ್ಸಿನಿಂದ ಯತ್ ಇದಂ ಕಿಂಚ= ಏನೇನಿದೆಯೊ— ಋಚಃ = ಋಕ್ಕುಗಳು ಯಜೂಂಷಿ = ಯಜುಸ್ಸುಗಳು ಸಾಮಾನಿ = ಸಾಮಗಳು ಛಂದಾಂಸಿ = ಛಂದಸ್ಸುಗಳು ಯಜ್ಞಾನ್ = ಯಜ್ಞಗಳು ಪ್ರಜಾಃ = ಪ್ರಜೆಗಳು ಪಶೂನ್ = ಪಶುಗಳು — ಇದಂ ಸರ್ವಂ = ಇದೆಲ್ಲವನ್ನೂ ಅಸೃಜತ=ಸೃಷ್ಟಿಸಿದನು. ಸಃ=ಅವನು ಯತ್ ಯತ್ ಏವ=ಯಾವು ಯಾವು ದನ್ನು ಅಸೃಜತ=ಸೃಷ್ಟಿಸಿದನೊ, ತತ್ ತತ್=ಅದು ಅದನ್ನೆ ಅತ್ತುಂ=ತಿನ್ನಲು ಅಧ್ರಿಯತ=ಸಂಕಲ್ಪಿಸಿದನು; ಸರ್ವಂ ವೈ=ಎಲ್ಲವನ್ನೂ ಅತ್ತಿ ಇತಿ=ತಿನ್ನುವನು, ತತ್ = ಅದುದರಿಂದ ಅದಿತೇಃ = ಅದಿತಿಗೆ ಅದಿತಿತ್ವಂ = ಅದಿತಿತ್ವವು, ಯಃ= ಯಾವನು ಅದಿತೇಃ = ಅದಿತಿಯ ಏತತ್ = ಈ ಅದಿತಿತ್ವಂ = ಅದಿತಿತ್ವವನ್ನು ಏವಂ=ಹೀಗೆ ವೇದ=ಅರಿಯುವನೊ, [ಅವನು] ಏತಸ್ಯ ಸರ್ವಸ್ಯ=ಇದೆಲ್ಲದರ ಅತ್ತಾ ಭವತಿ=ಭಕ್ಷಕನಾಗುವನು, ಸರ್ವಂ=ಎಲ್ಲವೂ ಅಸ್ಯ=ಇವನ ಅನ್ನಂಭವತಿ= ಅನ್ನವಾಗುವುದು.

೫. 'ಇವನನ್ನು ಕೊಂದರೆ ಬಹು ಕೊಂಚ ಅನ್ನವಾಗುತ್ತದೆ' ಎಂದು ಮೃತ್ಯುವು ಆಲೋಚನೆಮಾಡಿದನು. ಅವನು ಆ ವಾಕ್ಕಿನಿಂದಲೂ ಆ ಮನಸ್ಸಿನಿಂದಲೂ[1] ಏನೇನಿದೆಯೋ ಇದೆಲ್ಲವನ್ನೂ ಸೃಷ್ಟಿಸಿದನು. ಋಕ್ಕುಗಳು[2] ಯಜುಸ್ಸುಗಳು, ಸಾಮಗಳು, ಛಂದಸ್ಸುಗಳು,[3] ಯಜ್ಞಗಳು, ಪ್ರಜೆಗಳು,[4] ಪಶುಗಳು.[5] ಅವನು ಯಾವಯಾವುದನ್ನು[6] ಸೃಷ್ಟಿಸಿದನೊ, ಅದು ಅದನ್ನೇ ತಿನ್ನಲು ಸಂಕಲ್ಪಿಸಿದನು; ಅವನು ಎಲ್ಲವನ್ನೂ ತಿನ್ನುತ್ತಾನಾದುದರಿಂದ ಅವನಿಗೆ (ಮೃತ್ಯುವಿಗೆ) ಅದಿತಿಯೆಂಬ ಹೆಸರುಂಟಾಗಿದೆ.[7] ಯಾವನು ಅದಿತಿಯ ಈ ಅದಿತಿತ್ವವನ್ನು ಹೀಗೆ ಅರಿಯುವನೊ, ಅವನು ಇದೆಲ್ಲದರ ಭಕ್ಷಕನಾಗುವನು, ಎಲ್ಲವೂ ಇವನ ಅನ್ನವಾಗುವುದು.[8]

[[1] ಪುನಃ ಪುನಃ ವೇದಗಳನ್ನು ಕುರಿತು ಆಲೋಚನೆ ಮಾಡುತ್ತ.

[2] ಕರ್ಮಗಳಲ್ಲಿ ವಿನಿಯೋಗಮಾಡಲು ಮೊದಲಿಂದಲೂ ಇದ್ದ ವೇದಗಳನ್ನು ವ್ಯಕ್ತಮಾಡಿದನು. ಹಿಂದೆ ಮನಸ್ಸಿಗೆ ವೇದಗಳೊಂದಿಗೆ ಆದ ಮಿಥುನೀಭಾವವು ಅವ್ಯಕ್ತವಾದುದು.

[3] ಗಾಯತ್ರಿಯೇ ಮೊದಲಾದ ಛಂದಸ್ಸುಗಳಿಂದ ಕೂಡಿದ ಸ್ತೋತ್ರ, ಶಸ್ತ್ರ ಮುಂತಾದ ಕರ್ಮಾಂಗಭೂತವಾದ ತ್ರಿವಿಧಮಂತ್ರಗಳು

4 ಯಜ್ಞಗಳನ್ನು ಮಾಡುವವರು.

5 ಯಜ್ಞಕ್ಕೆ ಬೇಕಾದ ಗ್ರಾಮ್ಯಾರಣ್ಯಪಶುಗಳು.

6 ಕ್ರಿಯೆಯಾಗಲಿ ಕ್ರಿಯಾಸಾಧನವಾಗಲಿ ಫಲವಾಗಲಿ.

7 ಇದು ಅದಿತಿ ನಾಮದ ನಿರ್ವಚನ. 'ಅದಿತಿಯು ದ್ಯುಲೋಕ, ಅದಿತಿಯು ಅಂತರಿಕ್ಷ, ಅದಿತಿಯು ತಾಯಿ, ಅದಿತಿಯು ತಂದೆ' ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಎಂದು ಋಗ್ವೇದದಲ್ಲಿ (೧, ೮೯, ೧೦) ಹೇಳಿದೆ.

8 'ಎಲ್ಲದರ ಭಕ್ಷಕ' ಎಂದರೆ ಸರ್ವಾತ್ಮನಾಗುತ್ತಾನೆ ಎಂದರ್ಥ.]

**ಸೋಽಕಾಮಯತ, ಭೂಯಸಾ ಯಜ್ಞೇನ ಭೂಯೋ ಯಜೇಯೇತಿ। ಸೋಽಶ್ರಾಮ್ಯತ್, ಸ ತಪೋಽತಪ್ಯತ; ತಸ್ಯ ಶ್ರಾಂತಸ್ಯ ತಪ್ತಸ್ಯ ಯಶೋ ವೀರ್ಯಮುದಕ್ರಾಮತ್ । ಪ್ರಾಣಾ ವೈ ಯಶೋ ವೀರ್ಯಮ್ ; ತತ್ ಪ್ರಾಣೇಷೂತ್ಕ್ರಾಂತೇಷು ಶರೀರಂ ಶ್ವಯಿತುಮಧ್ರಿಯತ ; ತಸ್ಯ ಶರೀರ ಏವ ಮನ ಆಸೀತ್ ॥ ೬ ॥**

ಸಃ=ಅವನು ಅಕಾಮಯತ = ಬಯಸಿದನು ; ಭೂಯಸಾ = ದೊಡ್ಡ ಯಜ್ಞೇನ=ಯಜ್ಞದಿಂದ ಭೂಯಃ = ಪುನಃ ಯಜೇಯ = ಯಜ್ಞ ಮಾಡುವೆನು ಇತಿ=ಎಂದು. ಸಃ=ಅವನು ಅಶ್ರಾಮ್ಯತ್ = ಬಳಲಿದನು, ಸಃ = ಅವನು, ತಪಃ ಅತಪ್ಯತ = ತಪಸ್ಸು ಮಾಡಿದನು ; ಶ್ರಾಂತಸ್ಯ = ಬಳಲಿದ ತಪ್ತಸ್ಯ = ತಪ್ತನಾದ ತಸ್ಯ = ಅವನ ಯಶಃ = ಯಶಸ್ಸು ವೀರ್ಯಂ = ವೀರ್ಯವು ಉದಕ್ರಾಮತ್ = ಹೊರಬಂದಿತು. ಪ್ರಾಣಾಃ ವೈ=ಇಂದ್ರಿಯಗಳೇ ಯಶಃ=ಯಶಸ್ಸು ವೀರ್ಯಂ= ವೀರ್ಯವು ; ಪ್ರಾಣೇಷು ಉತ್ಕ್ರಾಂತೇಷು = ಇಂದ್ರಿಯಗಳು ಹೊರಬರಲು ತತ್ ಶರೀರಂ=ಆ ಶರೀರವು ಶ್ವಯಿತುಂ ಅಧ್ರಿಯತ=ಉಬ್ಬಲು ಆರಂಭಿಸಿತು ; ತಸ್ಯ=ಅವನ ಮನಃ=ಮನಸ್ಸು ಶರೀರೇ ಏವ=ಶರೀರದಲ್ಲಿಯೇ ಆಸೀತ್= ಇದ್ದಿತು.

೬. 'ದೊಡ್ಡ ಯಜ್ಞದಿಂದ ಪುನಃ[1] ಯಜ್ಞ ಮಾಡುವೆನು ಎಂದು ಅವನು ಬಯಸಿದನು. ಅವನು ಬಳಲಿದನು ಮತ್ತು ತಪಸ್ಸು ಮಾಡಿದನು. ಬಳಲಿದವನೂ ತಪಸ್ಸು ಮಾಡಿದವನೂ ಆದ ಅವನ(ಶರೀರದಿಂದ) ಯಶಸ್ಸೂ ವೀರ್ಯವೂ ಹೊರಬಂದುವು. ಇಂದ್ರಿಯಗಳೇ ಯಶಸ್ಸು ಮತ್ತು ವೀರ್ಯ[2] ಇಂದ್ರಿಯಗಳು ಹೊರಬರಲು ಆ ಶರೀರವು ಉಬ್ಬಲು ಆರಂಭಿಸಿತು,[3] (ಆದರೆ) ಅವನ ಮನಸ್ಸು ಶರೀದಲ್ಲಿಯೇ ಇದ್ದಿತು.

[ಈ ಮಂತ್ರದಲ್ಲಿಯೂ ಮುಂದಿನ ಮಂತ್ರದಲ್ಲಿಯೂ ಅಶ್ವ-ಅಶ್ವಮೇಧ ಪದಗಳ ನಿರ್ವಚನವನ್ನು ಹೇಳಿದೆ.

1 ಪ್ರಜಾಪತಿಯು ತನ್ನ ಹಿಂದಿನ ಜನ್ಮದಲ್ಲಿಯೂ ಅಶ್ವಮೇಧಯಾಗವನ್ನು ಮಾಡಿದನು.

2 ಯಶಸ್ಸು-ವೀರ್ಯಗಳಿಗೆ ಇಂದ್ರಿಯಗಳೇ ಕಾರಣ

3 ಮೊದಲು ಪ್ರಜಾಪತಿಯ ಸಂಬಂಧದಿಂದ ಶರೀರವು ಯಜ್ಞಕ್ಕೆ ಅರ್ಹವಾಗಿತ್ತು. ಈಗ ಅನರ್ಹವಾಯಿತು.]

**ಸೋಽಕಾಮಯತ, ಮೇಧ್ಯಂ ಮ ಇದಂ ಸ್ಯಾತ್, ಆತ್ಮನ್ವ್ಯನೇನ ಸ್ಯಾಮಿತಿ। ತತೋಽಶ್ವಃ ಸಮಭವತ್, ಯದಶ್ವತ್; ತನ್ಮೇಧ್ಯಮಭೂದಿತಿ, ತದೇವಾಶ್ವಮೇಧಸ್ಯಾಶ್ವಮೇಧತ್ವಮ್। ಏಷ ಹ ವಾ ಅಶ್ವಮೇಧಂ ವೇದ ಯ ಏನಮೇವಂ ವೇದ। ತಮನವರುಧ್ಯೈವಾಮನ್ಯತ। ತಂ ಸಂವತ್ಸರಸ್ಯ ಪರಸ್ತಾದಾತ್ಮನ ಆಲಭತ। ಪಶೂನ್ ದೇವತಾಭ್ಯಃ ಪ್ರತ್ಯೌಹತ್। ತಸ್ಮಾತ್ ಸರ್ವದೇವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮಾಲಭಂತೇ। ಏಷ ಹ ವಾ ಅಶ್ವಮೇಧೋ ಯ ಏಷ ತಪತಿ, ತಸ್ಯ ಸಂವತ್ಸರ ಆತ್ಮಾ; ಅಯಮಗ್ನಿರರ್ಕಃ, ತಸ್ಯೇಮೇ ಲೋಕಾ ಆತ್ಮಾನಃ ತಾವೇತಾವರ್ಕಾಶ್ವಮೇಧೌ। ಸೋ ಪುನರೇಕೈವ ದೇವತಾ ಭವತಿ ಮೃತ್ಯುರೇವ। ಅಪ ಪುನರ್ಮೃತ್ಯುಂ ಜಯತಿ, ನೈನಂ ಮೃತ್ಯುರಾಪ್ನೋತಿ, ಮೃತ್ಯುರಸ್ಯಾತ್ಮಾ ಭವತಿ, ಏತಾಸಾಂ ದೇವತಾನಾಮೇಕೋ ಭವತಿ ॥ ೭ ॥ ಇತಿ ದ್ವಿತೀಯಂ ಬ್ರಾಹ್ಮಣಮ್ ॥**

ಸಃ=ಅವನು ಅಕಾಮಯತ=ಬಯಸಿದನು; ಮೇ=ನನ್ನ ಇದಂ=ಈ [ಶರೀರವು] ಮೇಧ್ಯಂ ಸ್ಯಾತ್=ಯಜ್ಞಕ್ಕೆ ಅರ್ಹವಾಗಲಿ, ಅನೇನ=ಇದರಿಂದ ಆತ್ಮನ್ವೀ ಸ್ಯಾಂ=[ನಾನು] ಶರೀರವಂತನಾಗಲಿ ಇತಿ=ಎಂದು, ಯತ್ ಅಶ್ವತ್=ಅದು ಯಾವ ಕಾರಣದಿಂದ ಉಬ್ಬಿಕೊಂಡಿತೊ ತತಃ=ಅದರಿಂದ ಅಶ್ವಃ ಸಮಭವತ್=ಅಶ್ವವಾಯಿತು, ತತ್=ಅದು ಮೇಧ್ಯಂ ಅಭೂತ್=ಯಜ್ಞಾರ್ಹವಾಯಿತು ಇತಿ=ಎಂದು. ತತ್ ಏವ=ಅದುದರಿಂದ ಅಶ್ವಮೇಧಸ್ಯ=ಅಶ್ವಮೇಧವೆಂಬ ಯಜ್ಞಕ್ಕೆ ಅಶ್ವಮೇಧತ್ವಂ=ಅಶ್ವಮೇಧವೆಂದು ಹೆಸರಾಯಿತು. ಯಃ=ಯಾವನು ಏನಂ=ಇದನ್ನು ಏವಂ ವೇದ=ಹೀಗೆ ತಿಳಿದುಕೊಳ್ಳುವನೊ ಏಷಃ ಹ ವೈ=ಅವನೇ ಅಶ್ವಮೇಧಂ=ಅಶ್ವಮೇಧವನ್ನು ವೇದ=ತಿಳಿದಿರುತ್ತಾನೆ.

ತಂ= ಅದನ್ನು ಅನವರುಧ್ಯ ಏವ = ಕಟ್ಟಿಹಾಕದೆಯೇ ಅಮನ್ಯತ = ಉಪಾಸಿಸಿದನು, ಸಂವತ್ಸರಸ್ಯ ಪರಸ್ತಾತ್ = ಸಂವತ್ಸರವಾದ ಮೇಲೆ ತಂ ಅದನ್ನು ಆತ್ಮನೇ = ತನಗೆ ಆಲಭತ = ಬಲಿಕೊಟ್ಟನು. ಪಶೂನ್=[ಇತರ] ಪಶುಗಳನ್ನು ದೇವತಾಭ್ಯಃ= ದೇವತೆಗಳಿಗೆ ಪ್ರತ್ಯೌಹತ್ = ಕಳುಹಿಸಿದನು. ತಸ್ಮಾತ್ = ಆದುದರಿಂದ [ಈಗಲೂ ಯಾಜ್ಞಿಕರು] ಸರ್ವದೇವತ್ಯಂ=ಸರ್ವದೇವತೆಗಳಿಗಾಗಿ ಅರ್ಪಿಸಲ್ಪಟ್ಟ ಪ್ರೋಕ್ಷಿತಂ = ಪ್ರೋಕ್ಷಿಸಲ್ಪಟ್ಟ [ಅಶ್ವಂ = ಅಶ್ವವನ್ನು] ಪ್ರಾಜಾಪತ್ಯಂ ಆಲಭಂತೇ=ಪ್ರಜಾಪತಿಗೆ ಬಲಿಗೊಡುತ್ತಾರೆ. ಯಃ ಏಷಃ=ಯಾವ ಈ [ಆದಿತ್ಯನು] ತಪತಿ ತಪಿಸುತ್ತಾನೆಯೊ ಏಷಃ ವೈ = ಇವನೇ ಅಶ್ವಮೇಧಃ = ಅಶ್ವಮೇಧವು, ಸಂವತ್ಸರಃ=ಸಂವತ್ಸರವು ತಸ್ಯ ಆತ್ಮಾ=ಅವನ ಶರೀರವು, ಅಯಂ ಅಗ್ನಿಃ=ಈ ಅಗ್ನಿಯು ಅರ್ಕಃ=ಅರ್ಕವು ಇಮೇ ಲೋಕಾಃ=ಈ ಲೋಕಗಳು ತಸ್ಯ= ಅರ್ಕದ ಆತ್ಮಾನಃ=ಅವಯವಗಳು. ತೌ ಏತೌ=ಇವೆರಡೂ ಅರ್ಕಾಶ್ವಮೇಧೌ= ಅರ್ಕಾಶ್ವಮೇಧಗಳು. ಪುನಃ ಉ=ಪುನಃ ಸಾ ಏಕಾ ಏವ=ಅದು ಒಂದೇ ದೇವತಾ=ದೇವತೆಯು ಮೃತ್ಯುಃ ಏವ ಭವತಿ = ಮೃತ್ಯುವೇ ಆಗಿರುತ್ತದೆ. ಪುನಃ=ಪುನಃ ಮೃತ್ಯುಂ = ಮೃತ್ಯುವನ್ನು ಅಪಜಯತಿ = ಜಯಿಸುತ್ತಾನೆ, ಏನಂ= ಇವನನ್ನು ಮೃತ್ಯು=ಮೃತ್ಯುವು ನ ಆಪ್ನೋತಿ ಹೊಂದುವುದಿಲ್ಲ, ಮೃತ್ಯುಃ= ಮೃತ್ಯುವು ಅಸ್ಯ=ಇವನ ಆತ್ಮಾಭವತಿ=ಆತ್ಮವಾಗುತ್ತದೆ. ಏತಾಸಾಂ ದೇವತಾನಾಂ=ಈ ದೇವತೆಗಳೊಂದಿಗೆ ಏಕಃ ಭವತಿ=ಒಂದಾಗುತ್ತಾನೆ.

೭. 'ನನ್ನ ಈ (ಶರೀರವು) ಯಜ್ಞಕ್ಕೆ ಅರ್ಹವಾಗಲಿ, ಇದರಿಂದ ನಾನು ಶರೀರವಂತನಾಗಲಿ' ಎಂದು ಬಯಸಿದನು (ಮತ್ತು ಅದನ್ನು ಪ್ರವೇಶಿಸಿದನು). ಯಾವ ಕಾರಣದಿಂದ[1] ಅದು ಉಬ್ಬಿಕೊಂಡಿತೊ ಅದರಿಂದ ಅಶ್ವವೆನಿಸಿಕೊಂಡಿತು. ಅದು ಯಜ್ಞಾರ್ಹವಾದುದರಿಂದ ಅಶ್ವಮೇಧವೆಂಬ ಯಜ್ಞಕ್ಕೆ ಅಶ್ವಮೇಧವೆಂದು ಹೆಸರಾಯಿತು.[2] ಯಾವನು ಇದನ್ನು ಹೀಗೆ ತಿಳಿದುಕೊಳ್ಳುವನೊ ಅವನೇ ಅಶ್ವಮೇಧವನ್ನು ತಿಳಿದಿರುತ್ತಾನೆ. (ತಾನೇ ಮೇಧ್ಯಪಶುವೆಂದು ಕಲ್ಪಿಸಿಕೊಂಡು) ಅದನ್ನು ಕಟ್ಟಿಹಾಕದೆಯೇ ಉಪಾಸಿಸಿದನು.[3] ಒಂದು ಸಂವತ್ಸರವಾದ ಮೇಲೆ ಅದನ್ನು ತನಗೆ ಬಲಿಕೊಟ್ಟನು. ಇತರ ಪಶುಗಳನ್ನು (ಆಯಾ) ದೇವತೆಗಳಿಗೆ ಕಳುಹಿಸಿದನು. ಆದುದರಿಂದ (ಈಗಲೂ ಯಾಜ್ಞಿಕರು) ಸರ್ವದೇವತೆಗಳಿಗಾಗಿ ಅರ್ಪಿಸಲ್ಪಟ್ಟ ಮತ್ತು (ಮಂತ್ರಗಳಿಂದ ಪ್ರೋಕ್ಷಿಸಲ್ಪಟ್ಟ (ಅಶ್ವವನ್ನು)ಪ್ರಜಾಪತಿಗೆ ಬಲಿಕೊಡುತ್ತಾರೆ. ತಪಿಸುತ್ತಿರುವ ಈ (ಆದಿತ್ಯನೇ)ಅಶ್ವಮೇಧವು,[4] ಅವನ ಶರೀರವು ಸಂವತ್ಸರವು. ಈ ಅಗ್ನಿಯು ಅರ್ಕವು;[5] ಅರ್ಕದ ಅವಯವಗಳು ಈ ಲೋಕಗಳು. ಇವೆರಡೂ[6]

ಆರ್ಕಾಶ್ವಮೇಧಗಳು. ಇವೆರಡೂ ಪುನಃ ಒಂದೇ ದೇವತೆ[7] ಎಂದರೆ ಮೃತ್ಯುವೇ ಆಗುತ್ತವೆ, (ಯಾವನು ಹೀಗೆ ತಿಳಿದುಕೊಳ್ಳುವನೊ)[8] ಅವನು ಪುನರ್ಮೃತ್ಯುವನ್ನು ಜಯಿಸುತ್ತಾನೆ, ಇವನನ್ನು ಮೃತ್ಯುವು ಹೊಂದುವುದಿಲ್ಲ. ಮೃತ್ಯುವು ಇವನ ಆತ್ಮವಾಗುತ್ತದೆ; ಇವನು ಈ ದೇವತೆಗಳೊಂದಿಗೆ ಒಂದಾಗುತ್ತಾನೆ.

[ಈ ಪ್ರಕರಣದಲ್ಲಿ ಪ್ರಜಾಪತಿರೂಪವಾದ ಮೇಧ್ಯಪಶುವಿನ ಮತ್ತು ಅಗ್ನಿಯ ಸಮಷ್ಟಿ-ಉಪಾಸನೆಯನ್ನು ವಿಧಿಸಿದೆ; ಇವೆರಡನ್ನು ಕ್ರತುವಿನ ಫಲವೆಂದು ತಿಳಿಯಬೇಕು.

1 ಯಶೋವೀರ್ಯಗಳು ಹೊರಬಂದುದರಿಂದ.

2 ಆ ಕ್ರತುವೇ ಪ್ರಜಾಪತಿಯೆಂಬುದು ಅಶ್ವಮೇಧದ ಸ್ತುತಿಯಾಗಿದೆ.

3 ಇತರರೂ ಕೂಡ ತಮ್ಮನ್ನೇ ಮೇಧ್ಯಪಶುವೆಂದು ಕಲ್ಪಿಸಿಕೊಂಡು ಈ ರೀತಿ ಉಪಾಸನೆಮಾಡಬೇಕು: 'ಮಂತ್ರಗಳಿಂದ ಪ್ರೋಕ್ಷಿಸಲ್ಪಟ್ಟಾಗ ನಾನು ಇತರ ದೇವತೆಗಳಿಗಾಗಿ ಅರ್ಪಿಸಲ್ಪಟ್ಟಿದ್ದೇನೆ; ಆದರೆ ಬಲಿಕೊಟ್ಟಾಗ ನನಗೆ ನಾನೇ ಅರ್ಪಿಸಿಕೊಂಡಿದ್ದೇನೆ. ಇತರ ಪಶುಗಳನ್ನು ಬಲಿಯಾಗಿ ಹೊಂದಿದ ಭಿನ್ನ ಭಿನ್ನ ದೇವತೆಗಳು ನನ್ನ ಅವಯುವಗಳೇ.'

4 ಪಶುವೆಂಬ ಸಾಧನದಿಂದ ಮಾಡುವ ಕ್ರತುವನ್ನು ಶ್ರುತಿಯು ಸಾಕ್ಷಾತ್ ಫಲರೂಪದಿಂದ ತಿಳಿಸುತ್ತದೆ.

5 ಆದಿತ್ಯನು ಅಗ್ನಿಸಾಧ್ಯನಾಗಿರುವುದರಿಂದ ಕ್ರತ್ವಾತ್ಮವಾಗಿರುವ ಆ ಫಲವನ್ನು ಕ್ರತುರೂಪದಿಂದಲೇ ಹೇಳಿದೆ; ಸಾಧನರೂಪವಾದ ಅಗ್ನಿ, ಫಲರೂಪನಾದ ಆದಿತ್ಯ–ಇಬ್ಬರೂ ಕ್ರತುರೂಪರು ಎಂದರ್ಥ

6 ಸಾಧನವೂ ಕ್ರತುವೂ ಆದ ಅಗ್ನಿ ಮತ್ತು ಸಾಧ್ಯನೂ ಫಲರೂಪನೂ ಆದ ಆದಿತ್ಯ

7 ಮೊದಲು ಹಿರಣ್ಯಗರ್ಭ ಅಥವಾ ಮೃತ್ಯು ಎಂಬ ಒಂದೇ ದೇವತೆಯಿದ್ದಿತು. ಅದು ಕ್ರಿಯೆ ಸಾಧನ ಫಲ ಎಂದು ವಿಂಗಡಿಸಿಕೊಂಡಿತು. ಅದು ಕ್ರಿಯೆಯು ಮುಗಿದ ಮೇಲೆ ಒಂದೇ ದೇವತೆಯಾಯಿತು.

8 'ನಾನೇ ಅಶ್ವಮೇಧವೆಂಬ ಏಕದೇವತೆಯಾಗಿರುವ ಮೃತ್ಯು. ನನ್ನ ರೂಪವಾಗಿರುವ ಅಶ್ವಾಗ್ನಿಗಳಿಂದ ಈ ದೇವತೆಯನ್ನು ಪಡೆಯತಕ್ಕದ್ದು.']

## ಮೂರನೆಯ ಬ್ರಾಹ್ಮಣ

**ದ್ವಯಾ ಹ ಪ್ರಾಜಾಪತ್ಯಾಃ ದೇವಾಶ್ಚಾಸುರಾಶ್ಚ। ತತಃ ಕಾನೀಯಸಾ ಏವ ದೇವಾಃ, ಜ್ಯಾಯಸಾ ಅಸುರಾಃ; ತ ಏಷು ಲೋಕೇಷ್ವಸ್ಪರ್ಧಂತ; ತೇ ಹ ದೇವಾ ಊಚುಃ; ಹಂತಾಸುರಾನ್ ಯಜ್ಞ ಉದ್ಗೀಥೇನಾತ್ಯಯಾಮೇತಿ ॥ ೧ ॥**

ಪ್ರಾಜಾಪತ್ಯಾಃ=ಪ್ರಜಾಪತಿಯ ಮಕ್ಕಳು ದ್ವಯಾಃ ಹ=ಎರಡು ಬಗೆ—ದೇವಾಃ ಚ ಅಸುರಾಃ ಚ=ದೇವತೆಗಳು ಮತ್ತು ಅಸುರರು. ತತಃ=ಆದುದರಿಂದ ಎಂದರೆ ಸ್ವಭಾವತಃ ದೇವಾಃ=ದೇವತೆಗಳು ಕಾನೀಯಸಾಃ ಏವ=ಅಲ್ಪಸಂಖ್ಯಾಕರೇ, ಅಸುರಾಃ=ಅಸುರರು ಜ್ಯಾಯಸಾಃ=ಬಹುಸಂಖ್ಯಾಕರು; ತೇ=ಅವರು ಏಷು ಲೋಕೇಷು=ಈ ಲೋಕಗಳ [ಆಧಿಪತ್ಯಕ್ಕಾಗಿ] ಅಸ್ಪರ್ಧಂತ=ಸ್ಪರ್ಧಿಸಿದರು; ತೇ ಹ ದೇವಾಃ=ಆ ದೇವತೆಗಳು ಊಚುಃ=ಹೇಳಿದರು—ಹಂತ=ಸರಿ, ಯಜ್ಞೇ=ಯಜ್ಞದಲ್ಲಿ ಉದ್ಗೀಥೇನ=ಉದ್ಗೀಥದಿಂದ ಅಸುರಾನ್=ಅಸುರರನ್ನು ಅತ್ಯಯಾಮ=ಮೀರೋಣ ಇತಿ=ಎಂದು.

೧. ಪ್ರಜಾಪತಿಯ ಮಕ್ಕಳು ಎರಡು ಬಗೆ: ದೇವತೆಗಳು ಮತ್ತು ಅಸುರರು.[1] ಸ್ವಭಾವತಃ ದೇವತೆಗಳು[2] ಅಲ್ಪ ಸಂಖ್ಯಾಕರೇ, ಅಸುರರು[3] ಬಹುಸಂಖ್ಯಾಕರು.[4] ಅವರು ಈ ಲೋಕಗಳ (ಆಧಿಪತ್ಯಕ್ಕಾಗಿ ಪರಸ್ಪರ) ಸ್ಪರ್ಧಿಸಿದರು.[5] 'ಸರಿ! ನಾವು (ಈ) ಯಜ್ಞದಲ್ಲಿ ಉದ್ಗೀಥದ ಮೂಲಕ ಅಸುರರನ್ನು ಮೀರೋಣ'[6] ಎಂದು ದೇವತೆಗಳು ಹೇಳಿದರು.

[ಹಿಂದಿನ ಬ್ರಾಹ್ಮಣದಲ್ಲಿ ಅಶ್ವಮೇಧದ ಗತಿಯ ಮೂಲಕ ಉಪಾಸನೆಯಿಂದ ಕೂಡಿದ ಕರ್ಮಗಳಿಗೆ ಮೃತ್ಯ್ವಾತ್ಮಭಾವವೇ ಪರಮಗತಿಯೆಂದು ಹೇಳಿದ್ದಾಯಿತು. ಈಗ ಮೃತ್ಯ್ವಾತ್ಮಭಾವವನ್ನು ಪಡೆಯಲು ಸಾಧನವಾಗಿರುವ ಉಪಾಸನಾ ಕರ್ಮಗಳ ಮೂಲವನ್ನು ತಿಳಿಸಲು ಈ ಬ್ರಾಹ್ಮಣವು ಪ್ರಾರಂಭಿಸಲ್ಪಟ್ಟಿದೆ.

[1] ಪ್ರಜಾಪತಿಯ ವಾಕ್ ಮೊದಲಾದ ಇಂದ್ರಿಯಗಳು.

[2] ಶಾಸ್ತ್ರಜನಿತವಾದ ಉಪಾಸನಾ-ಕರ್ಮಗಳಿಂದ ಭಾವಿತವಾದ ಇಂದ್ರಿಯಗಳು ಪ್ರಕಾಶಿಸುವುದರಿಂದ ದೇವತೆಗಳಾಗುತ್ತವೆ.

[3] ಅದೇ ಇಂದ್ರಿಯಗಳು ಸ್ವಾಭಾವಿಕ-ಪ್ರತ್ಯಕ್ಷಾನುಮಾನಗಳಿಂದ ಉಂಟಾಗುವ ದೃಷ್ಟಪ್ರಯೋಜನವುಳ್ಳ ಉಪಾಸನಾ-ಕರ್ಮಗಳಿಂದ ಭಾವಿತವಾದರೆ ಅಸುರರಾಗು

ತ್ತವೆ. ತಮ್ಮ 'ಅಸುಗಳಲ್ಲಿ' ರಮಣರಾಗಿರುವುದರಿಂದ ಅಥವಾ ಸುರರಿಗಿಂತ ಭಿನ್ನ ರಾಗಿರುವುದರಿಂದ ಅಸುರರು.

4 ಶಾಸ್ತ್ರಜನಿತವಾದ ಪ್ರವೃತ್ತಿಗಿಂತ ಸ್ವಾಭಾವಿಕವಾದ ಪ್ರವೃತ್ತಿಯು ಅಧಿಕವಾಗಿರುವುದರಿಂದ ಜಗತ್ತಿನಲ್ಲಿ ಯಾವಾಗಲೂ ಅಸುರರೇ ಹೆಚ್ಚಾಗಿರುತ್ತಾರೆ.

5 ಇಂದ್ರಿಯಗಳಿಗೆ ಶಾಸ್ತ್ರಜನಿತವಾದ ಉಪಾಸನಾ-ಕರ್ಮ-ಭಾವನಾರೂಪವಾದ ವೃತ್ತಿಯುಂಟಾದರೆ ದೃಷ್ಟಪ್ರಯೋಜನವುಳ್ಳ ಪ್ರತ್ಯಕ್ಷಾನುಮಾನ-ಭಾವನಾ-ರೂಪವಾದ ಆಸುರೀ-ವೃತ್ತಿಯು ಮರೆಯಾಗಿ ದೇವತೆಗಳಿಗೆ ಜಯವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಅಸುರೀ ವೃತ್ತಿಯು ಕಾಣಿಸಿಕೊಂಡರೆ ಅಸುರರಿಗೆ ಜಯವಾಗುತ್ತದೆ. ಹೀಗೆ ದೇವತೆಗಳಿಗೆ ಜಯವಾದಾಗ ಧರ್ಮವು ಹೆಚ್ಚುವುದರಿಂದ ಪ್ರಜಾಪತಿತ್ವ-ಪ್ರಾಪ್ತಿಯ ವರೆಗೆ ಉತ್ತಮ ಗತಿಯಾಗುವುದು. ಆದರೆ ಅಸುರರಿಗೆ ಜಯವಾದಾಗ ಅಧರ್ಮವು ಹೆಚ್ಚಿ ಸ್ಥಾವರತ್ವ-ಪ್ರಾಪ್ತಿಯ ವರೆಗೆ ಅಧೋಗತಿಯಾಗುವುದು. ಉಭಯ-ಪ್ರವೃತ್ತಿಗಳು ಸಮಾನವಾದರೆ ಮನುಷ್ಯತ್ವವು ಪ್ರಾಪ್ತವಾಗುವುದು.

6 'ಜ್ಯೋತಿಷ್ಟೋಮಯಜ್ಞದಲ್ಲಿ ಉದ್ಗೀಥಕರ್ಮವೆಂಬ ಪದಾರ್ಥಕ್ಕೆ ಕರ್ತೃವಾದ ಸ್ವರೂಪವನ್ನು ಆಶ್ರಯಿಸಿಕೊಂಡು ಅಸುರರನ್ನು ಮೀರಿಸಿ ಶಾಸ್ತ್ರಪ್ರಕಾಶಿತವಾದ ನಮ್ಮ ದೇವಭಾವವನ್ನು ಪಡೆದುಕೊಳ್ಳೋಣ' ಎಂದು ಬಹುಸಂಖ್ಯಾಕರಾದ ಅಸುರರರಿಂದ ಪರಾಜಿತರಾದ ದೇವತೆಗಳು ಹೇಳಿದರು. ಇಲ್ಲಿ ಹೇಳಿರುವ ಸ್ವರೂಪಾಶ್ರಯಣವು ಉಪಾಸನಾ-ಕರ್ಮಗಳಿಂದ ಸಾಧ್ಯವು. ತದೇತಾನಿ ಜಪೇತ್ (೧, ೩, ೨೮) ಎಂದು ಮುಂದೆ ವಿಧಿಸಲಿರುವ ಮಂತ್ರಜಪವೇ ಕರ್ಮ, ಈಗ ನಿರೂಪಿಸುತ್ತಿರುವುದೇ ಉಪಾಸನೆಯು.]

**ತೇ ಹ ವಾಚಮೂಚುಃ, ತ್ವಂ ನ ಉದ್ಗಾಯೇತಿ; ತಥೇತಿ, ತೇಭ್ಯೋ ವಾಗುದಗಾಯತ್ । ಯೋ ವಾಚಿ ಭೋಗಸ್ತಂ ದೇವೇ-ಭ್ಯ ಆಗಾಯತ್, ಯತ್ ಕಲ್ಯಾಣಂ ವದತಿ ತದಾತ್ಮನೇ । ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿದ್ರುತ್ಯ ಪಾಪ್ಮನಾವಿಧ್ಯನ್; ಸ ಯಃ ಸ ಪಾಪ್ಮಾ, ಯದೇವೇದಮಪ್ರತಿ-ರೂಪಂ ವದತಿ ಸ ಏವ ಸ ಪಾಪ್ಮಾ ॥ ೨ ॥**

ತೇ ಹ=ಅವರು ವಾಚಮ್=ವಾಕ್ಕನ್ನು ಕುರಿತು ಊಚುಃ=ಹೇಳಿದರು-ತ್ವಂ=ನೀನು ನಃ=ನಮಗೋಸ್ಕರ ಉದ್ಗಾಯ=ಉದ್ಗೀಥವನ್ನು ಹಾಡು ಇತಿ=ಎಂದು; ತಥಾ=ಹಾಗೆಯೇ [ಆಗಲಿ] ಇತಿ=ಎಂದು [ಹೇಳಿ], ವಾಕ್=ವಾಕ್ಕು ತೇಭ್ಯಃ=ಅವರಿಗೆ ಉದಗಾಯತ್=ಉದ್ಗೀಥವನ್ನು ಹಾಡಿತು. ವಾಚಿ=ವಾಕ್ಕಿನ ಮೂಲಕ ಯಃ=ಯಾವ ಭೋಗಃ=ಫಲವಾಗುವುದೊ ತಂ=ಅದನ್ನು ದೇವೇಭ್ಯಃ=ದೇವತೆಗಳಿಗೆ

ಅಗಾಯತ್=ಹಾಡಿ ಕೊಡಿಸಿತು, ಯತ್=ಯಾವ ಕಲ್ಯಾಣಂ=ಶೋಭನವಾದ [ವರ್ಣಗಳನ್ನು] ವದತಿ=ಹೇಳುತ್ತದೆಯೊ ತತ್=ಅದನ್ನು ಆತ್ಮನೇ=ತನಗಾಗಿ [ಉಪಯೋಗಿಸಿಕೊಂಡಿತು]. ತೇ=ಅಸುರರು ವಿದುಃ=ತಿಳಿದುಕೊಂಡರು—ಅನೇನ ವೈ ಉದ್ಗಾತ್ರಾ=ಈ ಉದ್ಗಾತೃವಿನ ಮೂಲಕವೇ ನಃ=ನಮ್ಮನ್ನು ಅತ್ಯೇಷ್ಯಂತಿ=ಮೀರುವರು ಇತಿ=ಎಂದು, ತಂ ಅಭಿದ್ರುತ್ಯ=ಅದರ ಕಡೆಗೆ ನುಗ್ಗಿ ಪಾಪ್ಮನಾ=ಪಾಪದಿಂದ ಅವಿಧ್ಯನ್=ಹೊಡೆದರು ; ಸಃ ಯಃ ಸಃ ಪಾಪ್ಮಾ=ಆ ಯಾವ ಆ ಪಾಪವಿದೆಯೊ ಸಃ ಏವ ಸಃ ಪಾಪ್ಮಾ=ಅದೇ ಆ ಪಾಪವು ಯತ್ ಏವ ಇದಂ=ಯಾವ ಈ ಅಪ್ರತಿರೂಪಂ=ಪ್ರತಿಷಿದ್ಧರೂಪದಿಂದ ವದತಿ=ಹೇಳುತ್ತಾನೆಯೊ.

೨. 'ನೀನು ನಮಗೋಸ್ಕರ ಉದ್ಗೀಥವನ್ನು[1] ಹಾಡು' ಎಂದು ದೇವತೆಗಳು ವಾಕ್ಕಿಗೆ[2] ಹೇಳಿದರು. ವಾಕ್ಕು 'ಹಾಗೆಯೇ (ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. ವಾಕ್ಯದ ಮೂಲಕ ಉಂಟಾಗುವ (ಸಾಮಾನ್ಯ) ಫಲವನ್ನು ಅದು ದೇವತೆಗಳಿಗೆ (ಮೂರು ಪವಮಾನಗಳನ್ನು)[3] ಹಾಡಿ ಕೊಡಿಸಿತು ; ಆದರೆ (ಉಳಿದ ಒಂಬತ್ತು ಸ್ತೋತ್ರಗಳಿಂದ) ಶೋಭನವಾದ ವರ್ಣೋಚ್ಚಾರಣವೆಂಬ ಫಲವನ್ನು ತನಗಾಗಿ (ಉಪಯೋಗಿಸಿಕೊಂಡಿತು).[4] 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು.[5] ಅವರು ವಾಕ್ಕಿನ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆದರು.[6] (ಲೋಕದಲ್ಲಿ) ಕಂಡುಬರುವ ಶಾಸ್ತ್ರಪ್ರತಿಷಿದ್ಧವಾದ ಮಾತೇ ಆ ಪಾಪವು.[7]

[[1] ಉದ್ಗಾತೃವಿನ ಕರ್ಮವನ್ನು.

[2] ವಾಕ್ಕಿಗೆ ಅಭಿಮಾನಿನಿಯಾದ ದೇವತೆಗೆ. ಇಲ್ಲಿ ವಾಕ್ಕು ಮೊದಲಾದುವು ಉಪಾಸನೆಗೂ ಕರ್ಮಕ್ಕೂ ಕರ್ತೃವಾಗಿ ಹೇಳಲ್ಪಟ್ಟಿವೆ. ಏಕೆಂದರೆ ಪರಮಾರ್ಥತಃ ಜ್ಞಾನ ಕರ್ಮಗಳಿಗೆ ಸೇರಿದ ವ್ಯವಹಾರಕ್ಕೆಲ್ಲ ಅವರೇ ಕರ್ತೃಗಳು ಮತ್ತು ಫಲವನ್ನು ಪಡೆಯುವವರು, ಆತ್ಮನಲ್ಲ.

[3] ಜ್ಯೋತಿಷ್ಟೋಮವೆಂಬ ಯಾಗದಲ್ಲಿ ಉದ್ಗಾತೃವು ಹನ್ನೆರಡು ಸ್ತೋತ್ರಗಳನ್ನು ಹಾಡುತ್ತಾನೆ ಅವುಗಳಲ್ಲಿ ಮೂರಾದ ಪವಮಾನಗಳನ್ನು ಹಾಡಿದ ಫಲ ಯಜಮಾನನಿಗೂ, ಉಳಿದ ಒಂಬತ್ತು ಸ್ತೋತ್ರಗಳ ಫಲ ಉದ್ಗಾತೃವಿಗೂ ಹೋಗುತ್ತವೆ.

[4] ಶೋಭನವಾದ ವರ್ಣೋಚ್ಚಾರಣವು ವಾಗ್ದೇವತೆಯ ಅಸಾಧಾರಣ ಕರ್ಮ.

[5] ಕಲ್ಯಾಣ-ವರ್ಣೋಚ್ಚಾರಣವನ್ನು ವಾಕ್ಕು ತನಗಾಗಿ ಉಪಯೋಗಿಸಿಕೊಂಡುದರಿಂದ ಅಸುರರು ಅದರ ಪ್ರಹಾರಕ್ಕಾಗಿ ಒಂದು ಮರ್ಮಸ್ಥಾನವನ್ನು ಕಂಡು

ಹಿಡಿದು 'ಶಾಸ್ತ್ರಜನಿತ-ಉಪಾಸನಾ-ಕರ್ಮರೂಪವೂ ಉದ್ಗಾತೃರೂಪವೂ ಆದ ಜ್ಯೋತಿಸ್ಸಿನಿಂದ ನಮ್ಮ ಸ್ವಾಭಾವಿಕವಾದ ಉಪಾಸನಾ-ಕರ್ಮಗಳನ್ನು ಇವರು ಮೀರುತ್ತಾರೆ' ಎಂದು ತಿಳಿದುಕೊಂಡರು.

6 ತಮ್ಮ ಸಂಗಮರೂಪವಾದ ಪಾಪವನ್ನು ಅದಕ್ಕೆ ಜೋಡಿಸಿದರು ಎಂದರ್ಥ.

7 ಪ್ರಜಾಪತಿಯ ವಾಕ್ಕಿನಲ್ಲಿ ಒಳಹೊಗಿಸಿದ ಪಾಪವನ್ನು ಈಗಲೂ ನೋಡಬಹುದು. ಮನುಷ್ಯನು ತನಗೆ ಇಚ್ಛೆಯಿಲ್ಲದಿದ್ದರೂ ಅಸತ್ಯವೂ ಭೀಭತ್ಸವೂ ಅನೃತವೂ ಆದ ಮಾತುಗಳನ್ನು ಆಡುವುದು ಈ ಪಾಪದಿಂದಲೇ.]

**ಅಥ ಹ ಘ್ರಾಣಮೂಚುಃ, ತ್ವಂ ನ ಉದ್ಗಾಯೇತಿ ; ತಥೇತಿ, ತೇಭ್ಯಃ ಘ್ರಾಣ ಉದಗಾಯತ್ ; ಯಃ ಘ್ರಾಣೇ ಭೋಗಸ್ತಂ ದೇವೇಭ್ಯ ಆಗಾಯತ್, ಯತ್ ಕಲ್ಯಾಣಂ ಜಿಘ್ರತಿ ತದಾತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿದ್ರುತ್ಯ ಪಾಪ್ಮನಾವಿಧ್ಯನ್ ; ಸ ಯಃ ಸ ಪಾಪ್ಮಾ, ಯದೇವೇದಮಪ್ರತಿರೂಪಂ ಜಿಘ್ರತಿ ಸ ಏವ ಸ ಪಾಪ್ಮಾ ॥ ೩ ॥**

ಅಥ ಹ=ಆಮೇಲೆ ಘ್ರಾಣಂ=ಘ್ರಾಣೇಂದ್ರಿಯವನ್ನು ಕುರಿತು ; ಘ್ರಾಣೇ=ಘ್ರಾಣದ ಮೂಲಕ ; ಜಿಘ್ರತಿ=ಆಘ್ರಾಣಿಸುತ್ತದೆಯೊ. [ಉಳಿದುದು ಹಿಂದಿನಂತೆಯೆ.]

೩. 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು' ಎಂದು ಅವರು ಆಮೇಲೆ ಘ್ರಾಣೇಂದ್ರಿಯಕ್ಕೆ ಹೇಳಿದರು. ಘ್ರಾಣವು 'ಹಾಗೆಯೇ (ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. ಘ್ರಾಣದ ಮೂಲಕ ಉಂಟಾಗುವ (ಸಾಮಾನ್ಯ) ಫಲವನ್ನು ಅದು ದೇವತೆಗಳಿಗೆ ಹಾಡಿಕೊಡಿಸಿತು. ಆದರೆ ಶೋಭನವಾದ ಆ ಘ್ರಾಣವನ್ನು ತನಗಾಗಿ (ಉಪಯೋಗಿಸಿಕೊಂಡಿತು). 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು. ಅವರು ಘ್ರಾಣದ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆದರು. (ಲೋಕದಲ್ಲಿ) ಕಂಡುಬರುವ ಪ್ರತಿಷಿದ್ಧವಾದ ಘ್ರಾಣಗ್ರಹಣವೇ ಆ ಪಾಪವು.

**ಅಥ ಹ ಚಕ್ಷುರೂಚುಃ, ತ್ವಂ ನ ಉದ್ಗಾಯೇತಿ; ತಥೇತಿ, ತೇಭ್ಯಶ್ಚಕ್ಷುರುದಗಾಯತ್ ; ಯಶ್ಚಕ್ಷುಷಿ ಭೋಗಸ್ತಂ ದೇವೇಭ್ಯ ಆಗಾಯತ್, ಯತ್ ಕಲ್ಯಾಣಂ ಪಶ್ಯತಿ ತದಾತ್ಮನೇ। ತೇ ವಿದುರ-**

**ನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿದ್ರುತ್ಯ ಪಾಪ್ಮನಾ-ವಿಧ್ಯನ್; ಸ ಯಃ ಸ ಪಾಪ್ಮಾ, ಯದೇವೇದಮಪ್ರತಿರೂಪಂ ಪಶ್ಯತಿ ಸ ಏವ ಸ ಪಾಪ್ಮಾ ॥ ೪ ॥**

ಚಕ್ಷುಃ=ಚಕ್ಷುವನ್ನು ಕುರಿತು, ಚಕ್ಷುಷಿ=ಚಕ್ಷುವಿನ ಮೂಲಕ, ಪಶ್ಯತಿ=ನೋಡುತ್ತದೆಯೊ. [ಉಳಿದುದು ಹಿಂದಿನಂತೆಯೆ.]

೪. 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು' ಎಂದು ಅವರು ಆಮೇಲೆ ಚಕ್ಷುವಿಗೆ ಹೇಳಿದರು. ಚಕ್ಷುವು 'ಹಾಗೆಯೇ (ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. ಚಕ್ಷುವಿನ ಮೂಲಕ ಉಂಟಾಗುವ (ಸಾಮಾನ್ಯ) ಫಲವನ್ನು ಅದು ದೇವತೆಗಳಿಗೆ ಹಾಡಿಕೊಡಿಸಿತು; ಆದರೆ ಶೋಭನವಾದ ದರ್ಶನವನ್ನು ತನಗಾಗಿ (ಉಪಯೋಗಿಸಿಕೊಂಡಿತು). 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು. ಅವರು ಚಕ್ಷುವಿನ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆದರು. (ಲೋಕದಲ್ಲಿ) ಕಂಡುಬರುವ ಪ್ರತಿಷಿದ್ಧವಾದ ವಸ್ತುದರ್ಶನವೇ ಆ ಪಾಪವು.

**ಅಥ ಹ ಶ್ರೋತ್ರಮೂಚುಃ, ತ್ವಂ ನ ಉದ್ಗಾಯೇತಿ; ತಥೇತಿ, ತೇಭ್ಯಃ ಶ್ರೋತ್ರಮುದಗಾಯತ್; ಯಃ ಶ್ರೋತ್ರೇ ಭೋಗಸ್ತಂ ದೇವೇಭ್ಯ ಆಗಾಯತ್, ಯತ್ ಕಲ್ಯಾಣಂ ಶೃಣೋತಿ ತದಾ-ತ್ಮನೇ। ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿ-ದ್ರುತ್ಯ ಪಾಪ್ಮನಾವಿಧ್ಯನ್; ಸ ಯಃ ಸ ಪಾಪ್ಮಾ, ಯದೇವೇದ-ಮಪ್ರತಿರೂಪಂ ಶೃಣೋತಿ ಸ ಏವ ಸ ಪಾಪ್ಮಾ ॥ ೫ ॥**

ಶ್ರೋತ್ರಂ=ಶ್ರೋತ್ರವನ್ನು ಕುರಿತು; ಶ್ರೋತ್ರೇ=ಶ್ರೋತ್ರದ ಮೂಲಕ; ಶೃಣೋತಿ=ಕೇಳುತ್ತದೆಯೊ. [ಉಳಿದುದು ಹಿಂದಿನಂತೆಯೆ.]

೫. 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು' ಎಂದು ಅವರು ಆಮೇಲೆ ಶ್ರೋತ್ರಕ್ಕೆ ಹೇಳಿದರು. ಶ್ರೋತ್ರವು 'ಹಾಗೆಯೇ (ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. ಶ್ರೋತ್ರದ ಮೂಲಕ ಉಂಟಾಗುವ (ಸಾಮಾನ್ಯ) ಫಲವನ್ನು ಅದು ದೇವತೆಗಳಿಗೆ ಹಾಡಿ ಕೊಡಿಸಿತು. ಆದರೆ

ಶೋಭನವಾದ ಶ್ರವಣವನ್ನು ತನಗಾಗಿ ಉಪಯೋಗಿಸಿಕೊಂಡಿತು. 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು. ಅವರು ಶ್ರೋತ್ರದ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆದರು. (ಲೋಕದಲ್ಲಿ) ಕಂಡುಬರುವ ಪ್ರತಿಷಿದ್ಧವಾದ ಶ್ರವಣವೇ ಆ ಪಾಪವು.

ಅಥ ಹ ಮನ ಊಚುಃ, ತ್ವಂ ನ ಉದ್ಗಾಯೇತಿ ; ತಥೇತಿ, ತೇಭ್ಯೋ ಮನ ಉದಗಾಯತ್ ; ಯೋ ಮನಸಿ ಭೋಗಸ್ತಂ ದೇವೇಭ್ಯ ಆಗಾಯತ್, ಯತ್ ಕಲ್ಯಾಣಂ ಸಂಕಲ್ಪಯತಿ ತದಾತ್ಮನೇ । ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿದ್ರುತ್ಯ ಪಾಪ್ಮನಾವಿಧ್ಯನ್; ಸ ಯಃ ಸ ಪಾಪ್ಮಾ, ಯದೇ-ವೇದಮಪ್ರತಿರೂಪಂ ಸಂಕಲ್ಪಯತಿ ಸ ಏವ ಸ ಪಾಪ್ಮಾ; ಏವಮು ಖಲ್ವೇತಾ ದೇವತಾಃ ಪಾಪ್ಮಭಿರುಪಾಸೃಜನ್, ಏವಮೇನಾಃ ಪಾಪ್ಮನಾವಿಧ್ಯನ್ ॥ ೬ ॥

ಮನಃ=ಮನಸ್ಸನ್ನು ಕುರಿತು; ಮನಸಿ=ಮನಸ್ಸಿನ ಮೂಲಕ; ಸಂಕಲ್ಪಯತಿ=ಸಂಕಲ್ಪಿಸುವುದೊ. [ಉಳಿದುದು ಹಿಂದಿನಂತೆಯೆ.] ಏವಂ ಉ ಖಲು=ಹೀಗೆಯೇ ಏತಾಃ ದೇವತಾಃ=ಇತರ ದೇವತೆಗಳನ್ನು ಪಾಪ್ಮಭಿಃ=ಪಾಪಗಳಿಂದ ಉಪಾಸೃಜನ್=ಮುಟ್ಟಿಸಿದರು; ಏವಂ=ಹೀಗೆ ಏನಾಃ=ಇವರನ್ನು ಪಾಪ್ಮನಾ=ಪಾಪದಿಂದ ಅವಿಧ್ಯನ್=ಹೊಡೆದರು.

೬. 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು' ಎಂದು ಅವರು ಆಮೇಲೆ ಮನಸ್ಸಿಗೆ ಹೇಳಿದರು. ಮನಸ್ಸು 'ಹಾಗೆಯೇ (ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. ಮನಸ್ಸಿನ ಮೂಲಕ ಉಂಟಾಗುವ (ಸಾಮಾನ್ಯ) ಫಲವನ್ನು ಅದು ದೇವತೆಗಳಿಗೆ ಹಾಡಿ ಕೊಡಿಸಿತು ; ಆದರೆ ಶೋಭನವಾದ ಸಂಕಲ್ಪವನ್ನು ತನಗಾಗಿ (ಉಪಯೋಗಿಸಿಕೊಂಡಿತು). 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು. ಅವರು ಮನಸ್ಸಿನ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆದರು. (ಲೋಕದಲ್ಲಿ) ಕಂಡುಬರುವ ಪ್ರತಿಷಿದ್ಧ-ವಿಷಯಕ-

ಸಂಕಲ್ಪವೇ ಆ ಪಾಪವು. ಹೀಗೆಯೇ ಅವರು ಈ ಇತರ ದೇವತೆಗಳನ್ನು[1] ಪಾಪಗಳಿಂದ ಮುಟ್ಟಿಸಿದರು ; ಹೀಗೆ ಇವರನ್ನು ಪಾಪದಿಂದ ಹೊಡೆದರು.

[ಈ ಇಂದ್ರಿಯಾಭಿಮಾನಿದೇವತೆಗಳೆಲ್ಲ ಉದ್ಗೀಥವನ್ನು ಹಾಡಿದುದರಿಂದ ಮಂತ್ರ ಪ್ರಕಾಶ್ಯರೆಂದೂ ಉಪಾಸ್ಯರೆಂದೂ ದೇವತೆಗಳು ಇವರನ್ನು ಪರೀಕ್ಷಿಸಿದರು. ಆದರೆ ಅಭಿಮಾನಿದೇವತೆಗಳು ತಮ್ಮ ತಮ್ಮ ಶುಭಫಲವನ್ನು ತಾವೇ ಉಪಯೋಗಿಸಿಕೊಂಡ ಕಾರಣ ಅಸುರರಿಂದ ಪಾಪಸಂಸರ್ಗವನ್ನು ಪಡೆದು ಉದ್ಗೀಥವನ್ನು ಹಾಡಲು ಅಸಮರ್ಥರಾದುದರಿಂದ ಅಸತೋ ಮಾ ಸದ್ಗಮಯ (೧, ೩, ೨೮) ಎಂಬ ಮಂತ್ರಕ್ಕೆ ಇವರು ವಾಚ್ಯರಲ್ಲವೆಂದೂ, ಅಶುದ್ಧರಾದುದರಿಂದ ಉಪಾಸ್ಯರಲ್ಲವೆಂದೂ ದೇವತೆಗಳು ನಿರ್ಧಾರಕ್ಕೆ ಬಂದರು.

೧ ತ್ವಕ್ ಮೊದಲಾದ ಇಂದ್ರಿಗಳ ಅಭಿಮಾನಿದೇವತೆಗಳನ್ನು.]

**ಅಥ ಹೇಮಮಾಸನ್ಯಂ ಪ್ರಾಣಮೂಚುಃ, ತ್ವಂ ನ ಉದ್ಗಾಯೇತಿ ; ತಥೇತಿ, ತೇಭ್ಯ ಏಷ ಪ್ರಾಣ ಉದಗಾಯತ್ ; ತೇ ವಿದುರನೇನ ವೈ ನ ಉದ್ಗಾತ್ರಾತ್ಯೇಷ್ಯಂತೀತಿ, ತಮಭಿದ್ರುತ್ಯ ಪಾಪ್ಮನಾವಿವ್ಯತ್ಸನ್ ; ಸ ಯಥಾಶ್ಮಾನಮೃತ್ವಾ ಲೋಷ್ಟೋ ವಿಧ್ವಂಸೇತ, ಏವಂ ಹೈವ ವಿಧ್ವಂಸಮಾನಾ ವಿಷ್ವಂಚೋ ವಿನೇಶುಃ, ತತೋ ದೇವಾ ಅಭವನ್, ಪರಾಸುರಾಃ ; ಭವತ್ಯಾತ್ಮನಾ, ಪರಾಸ್ಯ ದ್ವಿಷನ್ ಭ್ರಾತೃವ್ಯೋ ಭವತಿ ಯ ಏವಂ ವೇದ ॥ ೭ ॥**

ಅಥ ಹ=ಅನಂತರ ಇಮಂ=ಈ ಆಸನ್ಯಂ=ಬಾಯಿಯಲ್ಲಿರುವ ಪ್ರಾಣಂ=ಪ್ರಾಣವನ್ನು ಕುರಿತು ಊಚುಃ=ಹೇಳಿದರು. ಅವಿವ್ಯತ್ಸನ್=ಹೊಡೆಯಲಿಚ್ಛಿಸಿದರು. [ಉಳಿದುದು ಹಿಂದಿನಂತೆಯೆ.] ಸಃ ಯಥಾ=ಹೇಗೆ ಲೋಷ್ಟಃ=ಮಣ್ಣು ಹೆಂಟೆಯು ಅಶ್ಮಾನಂ = ಬಂಡೆಯನ್ನು ಋತ್ವಾ = ಹೊಂದಿ ವಿಧ್ವಂಸೇತ=ಧ್ವಂಸವಾಗುವುದೊ ಏವಂ ಹ ಏವ=ಹಾಗೆಯೇ [ಅಸುರರು] ವಿಧ್ವಂಸಮಾನಾಃ=ಧ್ವಂಸರಾಗಿ ವಿಷ್ವಂಚಃ ಎಲ್ಲ ಕಡೆಯಲ್ಲಿಯೂ[ಎಸೆಯಲ್ಪಟ್ಟು] ವಿನೇಶುಃ=ನಾಶಹೊಂದಿದರು; ತತಃ=ಆದರಿಂದ ದೇವಾಃ ಅಭವನ್=ದೇವತೆಗಳಾದರು, ಅಸುರಾಃ=ಅಸುರರು ಪರಾ[ಅಭವನ್]=ಪರಾಭೂತರಾದರು. ಯಃ ಏವಂ ವೇದ=ಯಾವನು ಹೀಗೆ ತಿಳಿಯುತ್ತಾನೆಯೊ [ಅವನು] ಆತ್ಮನಾ ಭವತಿ=ತನ್ನ [ನಿಜಸ್ವರೂಪದಿಂದ] ಪ್ರತಿಷ್ಠಿತನಾಗುತ್ತಾನೆ. ಅಸ್ಯ=ಅವನ ದ್ವಿಷನ್=ದ್ವೇಷಿಯಾದ ಭ್ರಾತೃವ್ಯಃ=ದಾಯಾದಿಯು, ಪರಾ ಭವತಿ=ಪರಾಭೂತನಾಗುವನು.

೭. 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು' ಎಂದು ಅವರು ಆಮೇಲೆ ಬಾಯಿಯಲ್ಲಿರುವ ಪ್ರಾಣಕ್ಕೆ[1] ಹೇಳಿದರು. ಪ್ರಾಣವು 'ಹಾಗೆಯೇ

(ಆಗಲಿ)' ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು. 'ಈ ಉದ್ಗಾತೃವಿನ ಮೂಲಕವೇ ಇವರು ನಮ್ಮನ್ನು ಮೀರುವರು' ಎಂದು ಅಸುರರು ತಿಳಿದುಕೊಂಡರು. ಅವರು ಪ್ರಾಣದ ಕಡೆಗೆ ನುಗ್ಗಿ ಅದನ್ನು ಪಾಪದಿಂದ ಹೊಡೆಯಲಿಚ್ಛಿಸಿದರು. ಬಂಡೆಗೆ ಹೊಡೆಯಲ್ಪಟ್ಟ ಮಣ್ಣು ಹೆಂಟೆಯು ಹೇಗೆ ಪುಡಿಪುಡಿಯಾಗುವುದೊ ಹಾಗೆಯೇ ಅಸುರರು ಪುಡಿಪುಡಿಯಾಗಿ, ಎಲ್ಲ ಕಡೆಯಲ್ಲಿಯೂ ಎಸೆಯಲ್ಪಟ್ಟು ನಾಶಹೊಂದಿದರು. ಅದರಿಂದ[2] ದೇವತೆಗಳು (ತಮ್ಮ ರೂಪವನ್ನು)[3] ಪಡೆದರು, ಅಸುರರು ಪರಾಭೂತರಾದರು. ಯಾವನು[4] ಹೀಗೆ ತಿಳಿಯುತ್ತಾನೆಯೊ ಅವನು ತನ್ನ (ನಿಜಸ್ವರೂಪದಿಂದ)[5] ಪ್ರತಿಷ್ಠಿತನಾಗುತ್ತಾನೆ. ಅವನನ್ನು ದ್ವೇಷಿಸುವ ದಾಯಾದಿಯು[6] ಪರಾಭೂತನಾಗುವನು.

[[1]ವಾಗಾದಿಗಳಂತೆ ಪ್ರಾಣವು ದೋಷಸಂಪರ್ಕವನ್ನು ಹೊಂದಿರಲಿಲ್ಲ.

[2]ದೇವತ್ವಕ್ಕೆ ಅಡ್ಡಿಯಾಗಿದ್ದ ಅಸುರನಾಶದಿಂದ ಎಂದರೆ ಸ್ವಾಭಾವಿಕ ಸಂಗ-ಜನಿತ ಪಾಪಗಳಿಂದ ಮುಕ್ತರಾದುದರಿಂದ.

[3]ಶರೀರಾಭಿಮಾನವನ್ನು ಬಿಟ್ಟು ತಮ್ಮ ಅಗ್ನ್ಯಾದಿಸ್ವರೂಪವನ್ನು.

[4]ಶರೀರೇಂದ್ರಿಯಗಳೊಂದಿಗೆ ಉಂಟಾಗಿರುವ ತಾದಾತ್ಮ್ಯವನ್ನು ಬಿಟ್ಟು ಸಂಗರಹಿತವಾದ ಮುಖ್ಯಪ್ರಾಣವೇ ತನ್ನ ಸ್ವರೂಪವೆಂದು ಯಾವನು ಅರಿತುಕೊಳ್ಳುವನೊ.

[5]ಪ್ರಜಾಪತಿಸ್ವರೂಪದಿಂದ

[6]ಪ್ರಜಾಪತಿತ್ವವನ್ನು ಪಡೆಯಲು ಅಡ್ಡಿಯಾಗಿರುವ ಇಂದ್ರಿಯವಿಷಯಾಸಂಗದಿಂದ ಉಂಟಾಗಿರುವ ಪಾಪವು.]

**ತೇ ಹೋಚುಃ, ಕ್ವ ನು ಸೋಽಭೂದ್ಯೋ ನ ಇತ್ಥಮಸಕ್ತೇತಿ ; ಅಯಮಾಸ್ಯೇಽಂತರಿತಿ ; ಸೋಽಯಾಸ್ಯ ಆಂಗಿರಸಃ ; ಅಂಗಾನಾಂ ಹಿ ರಸಃ ॥ ೮ ॥**

ತೇ ಹ=ಅವರು, ದೇವತೆಗಳು ಊಚುಃ ಹೇಳಿದರು: ಯಾವನು ನಃ=ನಮ್ಮನ್ನು ಇತ್ಥಂ= ಹೀಗೆ ಅಸಕ್ತ=[ಸ್ವರೂಪದೊಂದಿಗೆ] ಸೇರಿಸಿದನೊ ಸಃ=ಅವನು ಕ್ವನು= ಎಲ್ಲಿ ಅಭೂತ್=ಇದ್ದನು ಇತಿ=ಎಂದು ; ಅಯಂ=ಇವನು ಆಸ್ಯೇ ಅಂತಃ= ಬಾಯಿಯ ಒಳಗೆ [ಇರುವನು] ಇತಿ=ಎಂದು; ಸಃ=ಅವನು ಅಯಾಸ್ಯಃ ಆಂಗಿರಸಃ=ಆಯಾಸ್ಯ ಆಂಗಿರಸನು, ಹಿ=ಏಕೆಂದರೆ ಅಂಗಾನಾಂ=ಅಂಗಗಳಿಗೆ ರಸಃ=ರಸವು.

೮. 'ಯಾವನು ನಮ್ಮನ್ನು ಹೀಗೆ (ಸ್ವರೂಪದೊಂದಿಗೆ) ಸೇರಿಸಿದನೊ ಅವನು ಎಲ್ಲಿದ್ದನು ?' ಎಂದು ದೇವತೆಗಳು ಹೇಳಿದರು 'ಅವನು ಬಾಯಿಯ ಒಳಗಿರುವನು'[1] (ಎಂದು ಕಂಡುಹಿಡಿದರು). ಅವನು ಆಯಾಸ್ಯ ಆಂಗಿರಸನು, ಏಕೆಂದರೆ ಅವನು ಅಂಗಗಳಿಗೆ ರಸವು.[2]

[ಶ್ರುತಿಯು ಪ್ರಾಣೋಪಾಸನೆಯ ಫಲವನ್ನು ಉಪಸಂಹಾರಮಾಡಿ ಈಗ ಆಖ್ಯಾಯಿಕಾರೂಪವನ್ನೇ ಆಶ್ರಯಿಸಿಕೊಂಡು ಮುಂದುವರಿಯುತ್ತದೆ: ವಾಗಾದಿಗಳನ್ನು ಬಿಟ್ಟು ಮುಖ್ಯ ಪ್ರಾಣನೇ ಆತ್ಮನೆಂದು ಆಶ್ರಯಿಸಲು ಕಾರಣವೇನು? ಏಕೆಂದರೆ ಈ ಪ್ರಾಣನು ವಾಗಾದಿಗಳಿಗೆ ಸಾಮಾನ್ಯವಾಗಿರುವ ಆತ್ಮನು' ಎಂಬುದನ್ನು ಶ್ರುತಿಯು ಆಖ್ಯಾಯಿಕೆಯಲ್ಲಿ ಯುಕ್ತಿಗಳಿಂದ ಉಪದೇಶಿಸುತ್ತದೆ.

[1] ಬಾಯಿಯಲ್ಲಿರುವ ಆಕಾಶದಲ್ಲಿ ಯಾವ ವಿಶೇಷರೂಪವನ್ನೂ ಹೊಂದದೆ ಪ್ರತ್ಯಕ್ಷನಾಗಿರುತ್ತಾನೆ.

[2] ಅವನು ಇರದಿದ್ದರೆ ಶರೀರೇಂದ್ರಿಯಗಳು ಒಣಗಿಹೋಗುತ್ತವೆ; ಪ್ರಾಣವನ್ನೇ ಆತ್ಮನೆಂದು ಆಶ್ರಯಿಸಬೇಕು ಎಂಬುದು ವಾಕ್ಯಾರ್ಥ.]

**ಸಾ ವಾ ಏಷಾ ದೇವತಾ ದೂರ್ನಾಮ, ದೂರಂ ಹ್ಯಸ್ಯಾ ಮೃತ್ಯುಃ, ದೂರಂ ಹ ವಾ ಅಸ್ಮಾನ್ಮೃತ್ಯುರ್ಭವತಿ ಯ ಏವಂ ವೇದ || ೯ ||**

ಸಾ ವೈ ಏಷಾ=ಆ ಈ ದೇವತಾ=ದೇವತೆಯು ದೂರ್ನಾಮ=ದೂರ್ ಎಂಬ ಹೆಸರಿನಿಂದ [ಪ್ರಖ್ಯಾತವಾಗಿದೆ], ಹಿ=ಏಕೆಂದರೆ ಅಸ್ಯಾಃ=ಇದರಿಂದ ಮೃತ್ಯುಃ=ಮೃತ್ಯುವು ದೂರಂ=ದೂರವು; ಯಃ ಏವಂ ವೇದ=ಯಾವನು ಹೀಗೆ ತಿಳಿಯುವನೊ ಅಸ್ಮಾತ್=ಅವನಿಂದ ಮೃತ್ಯುಃ=ಮೃತ್ಯುವು ದೂರಂ ಹ ವೈ ಭವತಿ=ದೂರವಾಗಿಯೇ ಇರುತ್ತದೆ.

೯. ಆ[1] ಈ[2] ದೇವತೆಯು ದೂರ್ ಎಂಬ ಹೆಸರಿನಿಂದ (ಪ್ರಖ್ಯಾತವಾಗಿದೆ), ಏಕೆಂದರೆ ಮೃತ್ಯುವು[3] ಇದಕ್ಕೆ ದೂರವಾಗಿದೆ, ಯಾವನು ಹೀಗೆ ತಿಳಿಯುವನೊ[4] ಅವನಿಗೆ ಮೃತ್ಯುವು ದೂರವಾಗಿಯೇ ಇರುವುದು.

[[1] ಯಾವ ಪ್ರಾಣವನನ್ನು ಸೇರಿ ಕಲ್ಲಿಗೆ ಹೊಡೆಯಲ್ಪಟ್ಟ ಮಣ್ಣುಹೆಂಟೆಯಂತೆ ಅಸುರರು ಪುಡಿಪುಡಿಯಾದರೊ ಅವನನ್ನು 'ಆ'ಶಬ್ದದಿಂದ ನಿರ್ದೇಶಿಸಿದೆ.

[2] ಅವನು ಬಾಯಿಯ ಒಳಗಿರುವನು' ಎಂದು ದೇವತೆಗಳಿಂದ ನಿರ್ಣಯಿಸಲ್ಪಟ್ಟವನು.

[3] ಆಸಕ್ತಿರೂಪವಾದ ಪಾಪವು

[4] ವಿಶುದ್ಧಿಗುಣದಿಂದ ಕೂಡಿರುವ ಪ್ರಾಣನನ್ನು ಯಾವನು ಉಪಾಸಿಸುವನೊ.]

**ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯ ಯತ್ರಾಸಾಂ ದಿಶಾಮಂತಸ್ತದ್ಗಮಯಾಂಚಕಾರ, ತದಾಸಾಂ ಪಾಪ್ಮನೋ ವಿನ್ಯದಧಾತ್; ತಸ್ಮಾನ್ನ ಜನಮಿಯಾತ್, ನಾಂತಮಿಯಾತ್, ನೇತ್ ಪಾಪ್ಮಾನಂ ಮೃತ್ಯುಮನ್ವವಾಯಾನೀತಿ || ೧೦ ||**

ಸಾ ವೈ ಏಷಾ=ಆ ಈ ದೇವತಾ=ದೇವತೆಯು ಏತಾಸಾಂ ದೇವತಾನಾಂ=ಈ ದೇವತೆಗಳ ಪಾಪ್ಮಾನಂ ಮೃತ್ಯುಂ=ಪಾಪರೂಪನಾದ ಮೃತ್ಯುವನ್ನು ಅಪಹೃತ್ಯ=ಪರಿಹರಿಸಿ ಯತ್ರ=ಎಲ್ಲಿ ಆಸಾಂ ದಿಶಾಂ=ಈ ದಿಕ್ಕುಗಳ ಅಂತಃ=ಕೊನೆಯೊ ತತ್ [ತತ್ರ]=ಅಲ್ಲಿಗೆ ಗಮಯಾಂಚಕಾರ=ಕಳುಹಿಸಿತು. ತತ್=ಅಲ್ಲಿ ಆಸಾಂ=ಇವರ ಪಾಪ್ಮನಃ=ಪಾಪಗಳನ್ನು ವಿನ್ಯದಧಾತ್=ಇಟ್ಟಿತು. ತಸ್ಮಾತ್=ಆದುದರಿಂದ [ಸತಂ] ಜನಂ=ಆ ಜನದ ಹತ್ತಿರ ನ ಇಯಾತ್=ಹೋಗಕೂಡದು, ಅಂತಂ ನ ಇಯಾತ್=ಆ ದೇಶಕ್ಕೂ ಹೋಗಕೂಡದು, ನೇತ್ ಪಾಪ್ಮಾನಂ ಮೃತ್ಯುಂ ಅನ್ವವಾಯಾನಿ=ಪಾಪರೂಪವಾದ ಮೃತ್ಯುವನ್ನು ಹೊಂದುವೆನೆಂಬ ಭಯದಿಂದ ಇತಿ=ಎಂದು.

೧೦. ಆ ಈ ದೇವತೆಯು ಈ (ವಾಗಾದಿ) ದೇವತೆಗಳ ಪಾಪರೂಪವಾದ ಮೃತ್ಯುವನ್ನು[1] ಪರಿಹರಿಸಿ,[2] ಎಲ್ಲಿ ಈ ದಿಕ್ಕುಗಳ ಕೊನೆಯಾಗುವದೊ[3] ಅಲ್ಲಿಗೆ ಕಳುಹಿಸಿತು. ಅಲ್ಲಿ ಇವರ ಪಾಪಗಳನ್ನು ಇಟ್ಟಿತು.[4] ಆದುದರಿಂದ 'ಪಾಪರೂಪವಾದ ಮೃತ್ಯುವನ್ನು ಹೊಂದುವೆನು' ಎಂಬ ಭಯದಿಂದ ಆ ಜನದ ಹತ್ತಿರ ಹೋಗಕೂಡದು,[5] ಆ ದೇಶಕ್ಕೂ ಹೋಗಕೂಡದು.[6]

[[1] ಸ್ವಾಭಾವಿಕವಾದ ಅಜ್ಞಾನದ ಪ್ರೇರಣೆಯಿಂದ ಇಂದ್ರಿಯ-ವಿಷಯಗಳಿಗೆ ಸಂಸ್ಪರ್ಶವುಂಟಾಗಿ ಆಸಕ್ತಿಯು ಜನಿಸುತ್ತದೆ; ಈ ಆಸಕ್ತಿಯಿಂದುಂಟಾಗುವ ಪಾಪದಿಂದ ಎಲ್ಲರೂ ಸಾಯುತ್ತಿರುವರು. ಆದುದರಿಂದ ಈ ಪಾಪವೇ ಮೃತ್ಯು.

[2] ವಾಗಾದಿದೇವತೆಗಳು ಪ್ರಾಣನೊಂದಿಗೆ ತಾದಾತ್ಮ್ಯವನ್ನು ಪಡೆದುದರಿಂದ ಪ್ರಾಣನು ಪಾಪವನ್ನು ಪರಿಹರಿಸುವವನು ಎನಿಸಿಕೊಂಡಿರುತ್ತಾನೆ.

[3] ಶ್ರೌತವಿಜ್ಞಾನವುಳ್ಳ ಜನರಿಂದ ವ್ಯಾಪ್ತವಾದ ದೇಶವು ದಿಕ್ಕುಗಳ ಅವಧಿಯೆಂದು ಕಲ್ಪಿಸಿದರೆ ವೈದಿಕ ವಿಜ್ಞಾನಕ್ಕೆ ವಿರೋಧಿಯಾಗಿರುವ ಜನರು ವಾಸಮಾಡುವ ದೇಶವೇ ದಿಕ್ಕುಗಳ ಕೊನೆಯಾಗುವುದು.

[4] ಪ್ರಾಣನೇ ತಾವೆಂಬ ಅಭಿಮಾನಶೂನ್ಯರಾದ ಅಂತ್ಯಜನರಲ್ಲಿ.

[5] ಏಕೆಂದರೆ ಪಾಪಕ್ಕೆ ಆಶ್ರಯರಾದ ಜನರ ಸಂಪರ್ಕದಿಂದ ಪಾಪದ ಸಂಪರ್ಕವೇ ಆಗುವುದು.

[6] ಜನಶೂನ್ಯವಾಗಿದ್ದರೂ ಅಲ್ಲಿಗೆ ಹೋಗಕೂಡದು, ಆ ದೇಶದಿಂದ ಬಂದಿರುವ ಜನರೊಂದಿಗೆ ಸೇರಬಾರದು ಎಂದು ಅಭಿಪ್ರಾಯ.]

**ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮುಪಹತ್ಯಾಥೈನಾ ಮೃತ್ಯುಮತ್ಯವಹತ್ ॥ ೧೧ ॥**

ಸಾ ವೈ ಏಷಾ . . . ಅಪಹೃತ್ಯ [ಉಳಿದವು ಹಿಂದಿನಂತೆಯೆ.] ಅಥ=ಅನಂತರ ಏನಾಃ=ಇವರನ್ನು ಮೃತ್ಯುಂ ಅತ್ಯವಹತ್=ಮೃತ್ಯುವಿನ ಆಚೆಗೆ ಒಯ್ದನು.

೧೧. ಆ ಈ ದೇವತೆಯು ಈ (ವಾಗಾದಿ) ದೇವತೆಗಳ ಪಾಪರೂಪವಾದ ಮೃತ್ಯುವನ್ನು ಪರಿಹರಿಸಿ, ಅನಂತರ ಇವರನ್ನು ಮೃತ್ಯುವಿನ ಆಚೆಗೆ ಒಯ್ದನು.[1]

[ಪ್ರಾಣಾತ್ಮಾಭಿಮಾನದ ಫಲವು ಇನ್ನು ಹೇಳಲ್ಪಡುತ್ತದೆ.

[1] ಅಗ್ನಿಯೇ ಮೊದಲಾದ ತಮ್ಮ ತಮ್ಮ ಅಪರಿಚ್ಛಿನ್ನವಾದ ದೇವತಾರೂಪವನ್ನು ಹೊಂದುವಂತೆ ಮಾಡಿದನು.]

**ಸ ವೈ ವಾಚಮೇವ ಪ್ರಥಮಾಮತ್ಯವಹತ್; ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್; ಸೋಽಯಮಗ್ನಿಃ ಪರೇಣ ಮೃತ್ಯುಮತಿಕ್ರಾಂತೋ ದೀಪ್ಯತೇ ॥ ೧೨ ॥**

ಸಃ ವೈ=ಅವನು, ಪ್ರಾಣನು ಪ್ರಥಮಾಂ=ಪ್ರಧಾನವಾದ ವಾಚಂ ಏವ=ವಾಗಿಂದ್ರಿಯವನ್ನೇ [ಮೊದಲು] ಅತ್ಯವಹತ್=ಒಯ್ದನು; ಸಾ= ಆ ವಾಕ್ಕು ಯದಾ= ಯಾವಾಗ ಮೃತ್ಯುವನ್ನು ಅತ್ಯಮುಚ್ಯತ=ದಾಟಿ ಮುಕ್ತವಾಯಿತೊ [ಆಗ] ಸಃ= ಅದು ಅಗ್ನಿಃ ಅಭವತ್=ಅಗ್ನಿಯಾಯಿತು; ಸಃ=ಅಯಂ=ಆ ಈ ಅತಿಕ್ರಾಂತಃ ಅಗ್ನಿಃ=ಅತಿಕ್ರಮಿಸಿದ ಅಗ್ನಿಯು ಮೃತ್ಯುಂ ಪರೇಣ=ಮೃತ್ಯುವಿನ ಆಚೆ ದೀಪ್ಯತೇ= ಪ್ರಕಾಶಿಸುತ್ತದೆ.

೧೨. ಆ ಪ್ರಾಣನು ಪ್ರಧಾನವಾದ[1] ವಾಗಿಂದ್ರಿಯವನ್ನೇ (ಮೊದಲು) ಒಯ್ದನು. ಆ ವಾಕ್ಕು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ಅಗ್ನಿಯಾಯಿತು.[2] ಅತಿಕ್ರಮಿಸಿದ ಆ ಈ ಅಗ್ನಿಯು ಮೃತ್ಯುವಿನ ಆಚೆ ಪ್ರಕಾಶಿಸುತ್ತದೆ.[3]

[[1] ಉದ್ಗೀಥವನ್ನು ಹಾಡುವುದರಲ್ಲಿ ಇತರ ಇಂದ್ರಿಯಗಳಿಗಿಂತ ವಾಕ್ಕು ಸಾಧಕತಮವಾಗಿರುವುದರಿಂದ ಅದು ಪ್ರಧಾನವೆನಿಸಿದೆ.

[2] ಆ ವಾಕ್ಕು ಮೊದಲೂ ಅಗ್ನಿಯಾಗಿದ್ದು ಮೃತ್ಯುವಿಯೋಗದ ಬಳಿಕವೂ ಅಗ್ನಿಯೇ ಆಯಿತು.

[3] ಮೋಕ್ಷಕ್ಕೆ ಪೂರ್ವದಲ್ಲಿ ಮೃತ್ಯುವು ತಡೆಯೊಡ್ಡಿದುದರಿಂದಲೂ ಶರೀರಕ್ಕೆ ಸಂಬಂಧಿಸಿದ ವಾಗ್ರೂಪದಲ್ಲಿದ್ದುದರಿಂದಲೂ ಈಗಿನಂತೆ ದೀಪ್ತಿಯುತವಾಗಿರಲಿಲ್ಲ; ಈಗ ಮೃತ್ಯುವಿಯೋಗದಿಂದ ಮೃತ್ಯುವಿನ ಅತೀತರೂಪದಲ್ಲಿ ದೇದೀಪ್ಯಮಾನವಾಗಿದೆ ಎಂದು ಭಾವ.]

**ಅಥ ಘ್ರಾಣಮತ್ಯವಹತ್; ಸ ಯದಾ ಮೃತ್ಯುಮತ್ಯಮುಚ್ಯತ ಸ ವಾಯುರಭವತ್; ಸೋಽಯಂ ವಾಯುಃ ಪರೇಣ ಮೃತ್ಯು-ಮತಿಕ್ರಾಂತಃ ಪವತೇ ॥ ೧೩ ॥**

ಘ್ರಾಣಂ=ಘ್ರಾಣೇಂದ್ರಿಯವನ್ನು ; ವಾಯುಃ=ವಾಯುವು ; ಪವತೇ=ಬೀಸುತ್ತಿದೆ. [ಉಳಿದುದು ಹಿಂದಿನಂತೆಯೆ.]

೧೩. ಅನಂತರ ಘ್ರಾಣೇಂದ್ರಿಯವನ್ನು ಒಯ್ದನು. ಆ ಘ್ರಾಣವು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ವಾಯುವಾಯಿತು. ಅತಿಕ್ರಮಿಸಿದ ಆ ಈ ವಾಯುವು ಮೃತ್ಯುವಿನ ಆಚೆ ಬೀಸುತ್ತಿದೆ.

**ಅಥ ಚಕ್ಷುರತ್ಯವಹತ್; ತದ್ಯದಾ ಮೃತ್ಯುಮತ್ಯಮುಚ್ಯತ ಸ ಆದಿತ್ಯೋಽಭವತ್; ಸೋಽಸಾವಾದಿತ್ಯಃ ಪರೇಣ ಮೃತ್ಯುಮತಿ-ಕ್ರಾಂತಸ್ತಪತಿ ॥ ೧೪ ॥**

ಚಕ್ಷುಃ=ಚಕ್ಷುರಿಂದ್ರಿಯವನ್ನು ಸಃ ಆದಿತ್ಯಃ ಅಭವತ್=ಅದು ಆದಿತ್ಯವಾಯಿತು —ಸಃ ಅಸೌ=ಆ ಈ ;—ತಪತಿ=ತಪಿಸುತ್ತಿರುವನು. [ಉಳಿದುದು ಹಿಂದಿನಂತೆಯೆ.]

೧೪. ಅನಂತರ ಚಕ್ಷುರಿಂದ್ರಿಯವನ್ನು ಒಯ್ದನು. ಆ ಚಕ್ಷುಸ್ಸು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ಆದಿತ್ಯನಾಯಿತು. ಅತಿಕ್ರಾಂತನಾದ ಆ ಈ ಆದಿತ್ಯನು ಮೃತ್ಯುವಿನ ಆಚೆ ತಪಿಸುತ್ತಿರುವನು.

**ಅಥ ಶ್ರೋತ್ರಮತ್ಯವಹತ್; ತದ್ಯದಾ ಮೃತ್ಯುಮತ್ಯಮುಚ್ಯತ ತಾ ದಿಶೋಽಭವನ್; ತಾ ಇಮಾ ದಿಶಃ ಪರೇಣ ಮೃತ್ಯುಮತಿ-ಕ್ರಾಂತಾಃ ॥ ೧೫ ॥**

ಶ್ರೋತ್ರಂ=ಶ್ರೋತ್ರೇಂದ್ರಿಯವನ್ನು ; ದಿಶಃ ಅಭವನ್=ದಿಕ್ಕುಗಳಾಯಿತು ; ತಾಃ ಇಮಾಃ=ಆ ಈ. [ಉಳಿದುದು ಹಿಂದಿನಂತೆಯೆ.]

೧೫. ಅನಂತರ ಶ್ರೋತ್ರೇಂದ್ರಿಯವನ್ನು ಒಯ್ದನು. ಆ ಶ್ರೋತ್ರವು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ದಿಕ್ಕುಗಳಾಯಿತು. ಆ ಈ ದಿಕ್ಕುಗಳು ಮೃತ್ಯುವನ್ನು ಅತಿಕ್ರಮಿಸಿ ಅದರ ಆಚೆ ಇರುತ್ತವೆ.

**ಅಥ ಮನೋಽತ್ಯವಹತ್ ; ತದ್ಯದಾ ಮೃತ್ಯುಮತ್ಯಮುಚ್ಯತ ಸ ಚಂದ್ರಮಾ ಅಭವತ್ ; ಸೋಽಸೌ ಚಂದ್ರಃ ಪರೇಣ ಮೃತ್ಯು-ಮತಿಕ್ರಾಂತೋ ಭಾತಿ ; ಏವಂ ಹ ವಾ ಏನಮೇಷಾ ದೇವತಾ ಮೃತ್ಯುಮತಿವಹತಿ ಯ ಏವಂ ವೇದ ॥ ೧೬ ॥**

ಮನಃ=ಮನಸ್ಸನ್ನು ; ಸ ಚಂದ್ರಮಾ ಅಭವತ್=ಅದು ಚಂದ್ರನಾಯಿತು ; ಭಾತಿ=ಪ್ರಕಾಶಿಸುತ್ತಿರುವನು. ಯಃ ಏವಂ ವೇದ=ಯಾವನು ಹೀಗೆ ಅರಿಯುತ್ತಾನೆಯೊ ಏನಂ=ಅವನನ್ನು ಏಷಾ ದೇವತಾ=ಈ ದೇವತೆಯು ಏವಂ ಹ ವೈ=ಹೀಗೆಯೇ ಮೃತ್ಯುಂ ಅತಿವಹತಿ=ಮೃತ್ಯುವಿನ ಆಚೆಗೆ ಒಯ್ಯುವುದು. [ಉಳಿದುದು ಹಿಂದಿನಂತೆಯೆ.]

೧೬. ಅನಂತರ ಮನಸ್ಸನ್ನು ಒಯ್ದನು. ಆ ಮನಸ್ಸು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ಚಂದ್ರನಾಯಿತು. ಅತಿಕ್ರಾಂತನಾದ ಆ ಈ ಚಂದ್ರನು ಮೃತ್ಯುವಿನ ಆಚೆ ಪ್ರಕಾಶಿಸುತ್ತಿರುವನು. ಯಾವನು ಹೀಗೆ ಅರಿಯುತ್ತಾನೆಯೊ[1] ಅವನನ್ನು ಈ ದೇವತೆಯು ಹೀಗೆಯೇ ಮೃತ್ಯುವಿನ ಆಚೆಗೆ ಒಯ್ಯುವುದು.

[[1] ಪ್ರಾಣನು ವಾಗಾದಿ ಪಂಚಕದ ರೂಪದಿಂದ ಕೂಡಿರುವನೆಂದು ಯಾವನು ಉಪಾಸಿಸುವನೊ.]

**ಅಥಾತ್ಮನೇಽನ್ನಾದ್ಯಮಾಗಾಯತ್ ; ಯದ್ಧಿ ಕಿಂಚಾನ್ನಮದ್ಯ-ತೇಽನೇನೈವ ತದದ್ಯತೇ ; ಇಹ ಪ್ರತಿತಿಷ್ಠತಿ ॥ ೧೭ ॥**

ಅಥ=ಅನಂತರ [ಪ್ರಾಣಃ=ಪ್ರಾಣನು] ಆತ್ಮನೇ=ತನಗಾಗಿ ಅನ್ನಾದ್ಯಂ=ತಿನ್ನಲಾಗುವ ಅನ್ನವನ್ನು ಆಗಾಯತ್=ಗಾನಮಾಡಿ ಪಡೆದುಕೊಂಡನು ; ಹಿ=ಏಕೆಂದರೆ ಯತ್ ಕಿಂಚ ಅನ್ನಂ=ಎಂಥ ಅನ್ನವಾದರೂ ಅದ್ಯತೇ=ತಿನ್ನಲ್ಪಡುವುದೊ ತತ್=ಅದು ಅನೇನ ಏವ=ಪ್ರಾಣನಿಂದಲೇ ಅದ್ಯತೇ=ತಿನ್ನಲ್ಪಡುವುದು; [ಮತ್ತು ಪ್ರಾಣನು] ಇಹ=ಇಲ್ಲಿ ಪ್ರತಿತಿಷ್ಠತಿ=ಪ್ರತಿಷ್ಠಿತನಾಗಿರುವನು.

೧೭. ಅನಂತರ (ಪ್ರಾಣನು) ಗಾನಮಾಡಿ[1] ತಿನ್ನಲಾಗುವ ಅನ್ನವನ್ನು ತನಗಾಗಿ ಪಡೆದುಕೊಂಡನು. ಏಕೆಂದರೆ (ಪ್ರಾಣಿಗಳು) ಎಂಥ ಅನ್ನವನ್ನಾದರೂ ತಿನ್ನುತ್ತವೆಯೊ ಅದು ಪ್ರಾಣನಿಂದಲೇ ತಿನ್ನಲ್ಪಡುವುದು, (ಮತ್ತು ಪ್ರಾಣನು) ಇಲ್ಲಿ[2] ಪ್ರತಿಷ್ಠಿತನಾಗಿರುವನು.[3]

[[1] ವಾಗಾದಿ ಇಂದ್ರಿಯಗಳು ತಮಗೋಸ್ಕರ ಹೇಗೆ ಗಾಯನ ಮಾಡಿದುವೊ ಹಾಗೆ ಮುಖ್ಯಪ್ರಾಣನು ಸರ್ವೇಂದ್ರಿಯಗಳಿಗೂ ಸಾಮಾನ್ಯವಾಗಿರುವ ಪ್ರಾಜಾಪತ್ಯಫಲವನ್ನು ಮೂರು ಪವಮಾನಗಳಿಂದ ಪಡೆದುಕೊಂಡು ಉಳಿದ ಒಂಬತ್ತು ಸ್ತೋತ್ರಗಳಿಂದ ತನಗಾಗಿ ತಿನ್ನಲಾಗುವ ಅನ್ನವನ್ನು ಪಡೆದುಕೊಂಡನು.

[2] ಶರೀರಾಕಾರದಲ್ಲಿ ಪರಿಣಿತವಾಗಿರುವ ಅನ್ನದಲ್ಲಿ.

[3] ಮುಖ್ಯಪ್ರಾಣನು ಆಹಾರವನ್ನು ತಿಂದರೂ ವಾಗಾದಿಗಳಿಗೆ ಆಸಕ್ತಿಯಿಂದ ಉಂಟಾದ ಪಾಪವು ಇವನಿಗೆ ಸಂಭವಿಸಲಿಲ್ಲ; ಏಕೆಂದರೆ ಶರೀರದಲ್ಲಿ ಪ್ರತಿಷ್ಠಿತನಾಗಿರುವುದಕ್ಕೋಸ್ಕರ ಪ್ರಾಣನು ಅನ್ನವನ್ನು ತಿನ್ನುತ್ತಾನೆ.]

**ತೇ ದೇವಾ ಅಬ್ರುವನ್, ಏತಾವದ್ವಾ ಇದಂ ಸರ್ವಂ ಯದನ್ನಂ, ತದಾತ್ಮನ ಆಗಾಸೀಃ, ಅನು ನೋಽಸ್ಮಿನ್ನನ್ನ ಆಭಜಸ್ವೇತಿ; ತೇ ವೈ ಮಾಽಭಿಸಂವಿಶತೇತಿ; ತಥೇತಿ, ತಂ ಸಮಂತಂ ಪರಿಣ್ಯವಿಶಂತ। ತಸ್ಮಾದ್ಯದನೇನಾನ್ನಮತ್ತಿ ತೇನೈತಾಸ್ತೃಪ್ಯಂತಿ; ಏವಂ ಹ ವಾ ಏನಂ ಸ್ವಾ ಅಭಿಸಂವಿಶಂತಿ, ಭರ್ತಾ ಸ್ವಾನಾಂ ಶ್ರೇಷ್ಠಃ ಪುರ ಏತಾ ಭವತ್ಯನ್ನಾದೋಽಧಿಪತಿರ್ಯ ಏವಂ ವೇದ; ಯ ಉ ಹೈವಂವಿದಂ ಸ್ವೇಷು ಪ್ರತಿ ಪ್ರತಿರ್ಬುಭೂಷತಿ ನ ಹೈವಾಲಂ ಭಾರ್ಯೇಭ್ಯೋ ಭವತಿ; ಅಥ ಯ ಏವೈತಮನು ಭವತಿ, ಯೋ ವೈತಮನು ಭಾರ್ಯಾನ್ ಬುಭೂರ್ಷತಿ ಸ ಹೈವಾಲಂ ಭಾರ್ಯೇಭ್ಯೋ ಭವತಿ ॥ ೧೮ ॥**

ತೇ ದೇವಾಃ=ಆ ದೇವತೆಗಳು ಅಬ್ರುವನ್=ಹೇಳಿದರು—ಇದಂ ಯತ್ ಅನ್ನಂ=ಈ ಅನ್ನವು ಎಷ್ಟಿದೆಯೊ ಸರ್ವಂ ಏತಾವತ್ ವೈ=ಅದೆಲ್ಲವೂ ಇಷ್ಟೇ, ತತ್=ಅದನ್ನು ಆತ್ಮನೇ=ನಿನಗಾಗಿ ಆಗಾಸೀಃ=ಗಾನಮಾಡಿ ಪಡೆದುಕೊಂಡಿರುತ್ತೀಯೆ, ಅನು=ಈಗ ನಃ=ನಮ್ಮನ್ನು ಅಸ್ಮಿನ್ ಅನ್ನೇ=ಈ ಅನ್ನದಲ್ಲಿ ಆಭಜಸ್ವ [ಆಭಾಜಯಸ್ವ]=ಭಾಗಿಗಳಾಗಿ ಮಾಡು ಇತಿ=ಎಂದು; ತೇ ವೈ [ಯೂಯಂ]= ಅಂತಹ ನೀವು ಮಾ ಅಭಿಸಂವಿಶತ=ನನ್ನ ಸುತ್ತಲೂ ಅಭಿಮುಖರಾಗಿ ಕುಳಿತು

ಕೊಳ್ಳಿರಿ ಇತಿ=ಎಂದು ; ತಥಾ=ಹಾಗೆಯೇ ಅಗಲಿ ಇತಿ=ಎಂದು [ಹೇಳಿ] ತಂ ಪರಿಸಮಂತಂ=ಅವನ ಸುತ್ತಲೂ ನ್ಯವಿಶಂತ=ಕುಳಿತುಕೊಂಡರು. ತಸ್ಮಾತ್=ಆದುದರಿಂದ [ಮನುಷ್ಯನು] ಅನೇನ=ಇವನ ಮೂಲಕ ಯತ್ ಅನ್ನಂ=ಯಾವ ಅನ್ನವನ್ನು ಅತ್ತಿ=ತಿನ್ನುತ್ತಾನೆಯೊ ತೇನ=ಅದರ ಮೂಲಕ ಏತಾಃ=ಈ ದೇವತೆಗಳು ತೃಪ್ಯಂತಿ=ತೃಪ್ತರಾಗುವರು, ಯಃ=ಯಾವನು ಏವಂ=ಹೀಗೆ ವೇದ=ಅರಿಯುತ್ತಾನೆಯೊ ಏನಂ=ಇವನ ಸುತ್ತಲೂ ಏವಂ ಹ ವೈ=ಹಾಗೆಯೇ ಸ್ವಾಃ=ತನ್ನ ಸಂಬಂಧಿಗಳು ಅಭಿಸಂವಿಶಂತಿ=ಕುಳಿತುಕೊಳ್ಳುತ್ತಾರೆ, [ಇವನು] ಸ್ವಾನಾಂ=ತನ್ನ ಸಂಬಂಧಿಗಳ ಭರ್ತಾ=ಆಶ್ರಯನೂ ಶ್ರೇಷ್ಠಃ=ಶ್ರೇಷ್ಠನೂ ಪುರಃ ಏತಾ=ಪುರೋಗಾಮಿಯೂ ಅನ್ನಾದಃ=ಮಹಾ ಅನ್ನಭೋಜಿಯೂ ಅಧಿಪತಿಃ=ಅಧಿಪತಿಯೂ ಭವತಿ=ಆಗುತ್ತಾನೆ ; ಸ್ವೇಷು=ತನ್ನ ಸಂಬಂಧಿಗಳಲ್ಲಿ ಯಃ ಉ ಹ=ಯಾವನು ಏವಂವಿದಂ ಪ್ರತಿ=ಹೀಗೆ ತಿಳಿದಿರುವವನು ಪ್ರತಿ ಪ್ರತಿಃ ಬುಭೂಷತಿ=ಸ್ಪರ್ಧಿಸಲು ಬಯಸುವನೊ [ಸಃ=ಅವನು] ಭಾರ್ಯೇಭ್ಯಃ=ಆಶ್ರಿತರಿಗೆ ನ ಅಲಂ ಹಿ ಏವ=ಪೋಷಣೆಯನ್ನು ಕೊಡಲು ಶಕ್ತನಾಗುವುದಿಲ್ಲ ; ಅಥ=ಪರಂತು ಯಃ ಏವ=ಯಾವನು ಏತಂ=ಇವನನ್ನು ಅನುಭವತಿ=ಅನುಸರಿಸುತ್ತಾನೆಯೊ ವಾ=ಅಥವಾ ಯಃ=ಯಾವನು ಎತಂ ಅನು=ಇವನನ್ನು ಅನುಸರಿಸಿ ಭಾರ್ಯಾನ್=ಆಶ್ರಿತರನ್ನು ಬುಭೂರ್ಷತಿ=ಪೋಷಿಸಲು ಬಯಸುತ್ತಾನೆಯೊ ಸಃ ಹ ಏವ=ಅವನೇ ಭಾರ್ಯೇಭ್ಯಃ ಅಲಂ ಭವತಿ=ಆಶ್ರಿತರಿಗೆ ಪೋಷಣೆಯನ್ನು ಕೊಡಲು ಶಕ್ತನಾಗುತ್ತಾನೆ.

೧೮. ಆ ದೇವತೆಗಳು[1] ಹೇಳಿದರು : 'ಈ ಅನ್ನವೆಲ್ಲವೂ ಇಷ್ಟೇ ; ಅದನ್ನು ನಿನಗಾಗಿ ಗಾನಮಾಡಿ ಪಡೆದುಕೊಂಡಿರುತ್ತೀಯೆ. ಈಗ ನಮ್ಮನ್ನು ಅನ್ನದಲ್ಲಿ ಭಾಗಿಗಳಾಗಿ ಮಾಡು.' 'ಅಂತಹ ನೀವು ನನ್ನ ಸುತ್ತಲೂ ಅಭಿಮುಖರಾಗಿ ಕುಳಿತುಕೊಳ್ಳಿರಿ' ಎಂದು (ಪ್ರಾಣನು ಹೇಳಿದನು). 'ಹಾಗೆಯೇ ಆಗಲಿ' ಎಂದು (ದೇವತೆಗಳು ಹೇಳಿ) ಅವನ ಸುತ್ತಲೂ ಕುಳಿತುಕೊಂಡರು.[2] ಆದುದರಿಂದ (ಮನುಷ್ಯನು) ಈ ಪ್ರಾಣನ ದ್ವಾರಾ ಯಾವ ಅನ್ನವನ್ನು ತಿನ್ನುತ್ತಾನೆಯೊ ಅದರ ಮೂಲಕ ಈ ದೇವತೆಗಳು ತೃಪ್ತರಾಗುವರು. ಯಾವನು ಹೀಗೆ ಅರಿಯುತ್ತಾನೆಯೊ[3] ಅವನ ಸುತ್ತಲೂ ಹಾಗೆಯೇ ಅವನ ಸಂಬಂಧಿಗಳು ಕುಳಿತುಕೊಳ್ಳುತ್ತಾರೆ ಮತ್ತು ಇವನು ತನ್ನ ಸಂಬಂಧಿಗಳಿಗೆ ಆಶ್ರಯನೂ, ಶ್ರೇಷ್ಠನೂ, ಪುರೋಗಾಮಿಯೂ, ಮಹಾ ಅನ್ನಭೋಜಿಯೂ ಅಧಿಪತಿಯೂ ಆಗುತ್ತಾನೆ. ಯಾವನು ತನ್ನ ಸಂಬಂಧಿಗಳಲ್ಲಿ ಹೀಗೆ ತಿಳಿದಿರುವವನ ಪ್ರತಿ ಸ್ಪರ್ಧಿಸಲು ಬಯಸುವನೊ (ಅವನು) ತನ್ನ ಆಶ್ರಿತರನ್ನು ಪೋಷಿಸಲು ಶಕ್ತನಾಗುವುದಿಲ್ಲ. ಪರಂತು ಯಾವನು ಇವನನ್ನು ಅನುಸರಿಸು

ತ್ತಾನೆಯೊ ಅಥವಾ ಇವನನ್ನು ಅನುಸರಿಸಿ ಆಶ್ರಿತರನ್ನು ಪೋಷಿಸಲು ಬಯಸು ತ್ತಾನೆಯೊ ಅವನೇ ಅವರನ್ನು ಪೋಷಿಸಲು ಶಕ್ತನಾಗುತ್ತಾನೆ.

[1 ವಾಕ್ಕು ಮೊದಲಾದ ಇಂದ್ರಿಯಗಳು; ಸ್ವವಿಷಯವನ್ನು ಪ್ರಕಾಶಿಸುವುದರಿಂದ 'ದೇವತೆಗಳು' ಎಂದು ಹೇಳಲ್ಪಟ್ಟಿವೆ.

2 ವಾಗಾದಿಗಳಿಗೆ ಅನ್ನಸಂಬಂಧವಿರುವುದು ಪ್ರಾಣನ ಮೂಲಕವೇ ವಿನಾ ಸ್ವತಂತ್ರ ವಾಗಿ ಅಲ್ಲ.

3 ವಾಕ್ಕು ಮೊದಲಾದ ಪಂಚೇಂದ್ರಿಯಗಳು ಪ್ರಾಣನನ್ನೇ ಆಶ್ರಯಿಸಿವೆ ಎಂದು ಅರಿತಿರುವವನು.]

**ಸೋಽಯಾಸ್ಯ ಆಂಗಿರಸಃ, ಅಂಗಾನಾಂ ಹಿ ರಸಃ; ಪ್ರಾಣೋ ವಾ ಅಂಗಾನಾಂ ರಸಃ, ಪ್ರಾಣೋ ಹಿ ವಾ ಅಂಗಾನಾಂ ರಸಃ; ತಸ್ಮಾದ್ಯಸ್ಮಾತ್ಕಸ್ಮಾಚ್ಚಾಂಗಾತ್ ಪ್ರಾಣ ಉತ್ಕ್ರಾಮತಿ ತದೇವ ತಚ್ಛುಷ್ಯತಿ, ಏಷ ಹಿ ವಾ ಅಂಗಾನಾಂ ರಸಃ ॥ ೧೯ ॥**

ಸಃ ಅಯಾಸ್ಯಃ ಆಂಗಿರಸಃ, ಅಂಗಾನಾಂ ಹಿ ರಸಃ (೧, ೩, ೮ ನೋಡಿ); ಪ್ರಾಣಃ ವೈ = ಪ್ರಾಣನೇ ಅಂಗಾನಾಂ = ಅಂಗಗಳ ರಸಃ = ರಸವು, ಪ್ರಾಣಃ ಹಿ ವೈ=ಅಂಗಾನಾಂ ರಸಃ=ಪ್ರಾಣನೇ ಅಂಗಗಳ ರಸವೆಂಬುದು ಪ್ರಸಿದ್ಧ ವಾಗಿದೆ; ಯಸ್ಮಾತ್ ಕಸ್ಮಾತ್ ಚ ಅಂಗಾತ್=ಯಾವ ಅಂಗದಿಂದಾದರೂ ಪ್ರಾಣಃ= ಪ್ರಾಣನು ಉತ್ಕ್ರಾಮತಿ=ಬಿಟ್ಟುಹೋಗುವನೊ ತತ್=ಅದು ತತ್ ಏವ=ಅಲ್ಲಿಯೇ ಶುಷ್ಯತಿ=ಒಣಗುತ್ತದೆ, ತಸ್ಮಾತ್=ಆದುದರಿಂದ ಏಷಃ ಹಿ ವೈ=ಇವನೇ ಅಂಗಾನಾಂ ರಸಃ=ಅಂಗಗಳ ರಸವು

೧೯. ಅವನು ಅಯಾಸ್ಯ ಆಂಗಿರಸನು, ಏಕೆಂದರೆ ಅವನು ಅಂಗಗಳರಸವು. ಪ್ರಾಣನೇ ಅಂಗಗಳ ರಸವು. 'ಪ್ರಾಣನೇ ಅಂಗಗಳ ರಸವೆಂಬುದು ಪ್ರಸಿದ್ಧ ವಾಗಿದೆ. ಆದುದರಿಂದ ಯಾವ ಅಂಗದಿಂದ ಪ್ರಾಣನು ಬಿಟ್ಟುಹೋಗುವನೊ ಅದು ಅಲ್ಲಿಯೇ ಒಣಗುತ್ತದೆ. ಆದುದರಿಂದ ಇವನೇ ಅಂಗಗಳ ರಸವು.

[ಪ್ರಾಣನು ಶರೀರೇಂದ್ರಿಯಗಳಿಗೆ ಆತ್ಮನೆಂಬುದು ಸಿದ್ಧವಾಯಿತು. ಆದುದರಿಂದ ವಾಗಾದಿಗಳನ್ನು ಬಿಟ್ಟು ಪ್ರಾಣನನ್ನೇ ಉಪಾಸಿಸಬೇಕೆಂಬುದು ಒಟ್ಟು ಅರ್ಥ.]

**ಏಷ ಉ ಏವ ಬೃಹಸ್ಪತಿಃ; ವಾಗ್ವೈ ಬೃಹತೀ, ತಸ್ಯಾ ಏಷ ಪತಿಃ, ತಸ್ಮಾದು ಬೃಹಸ್ಪತಿಃ ॥ ೨೦ ॥**

ಏಷಃ ಉ ಏವ=ಇವನೇ ಪುನಃ ಬೃಹಸ್ಪತಿಃ=ಬೃಹಸ್ಪತಿಯು, ವಾಕ್ ವೈ=ವಾಕ್ಕೇ ಬೃಹತೀ=ಬೃಹತೀ ಛಂದಸ್ಸು, ಏಷಃ=ಇವನು ತಸ್ಯಾಃ=ಅವಳ [ಅದರ] ಪತಿಃ=ಪತಿಯು, ತಸ್ಮಾತ್ ಉ=ಆದುದರಿಂದ ಬೃಹಸ್ಪತಿಃ=[ಇವನು] ಬೃಹಸ್ಪತಿಯು.

೨೦. ಪುನಃ ಇವನೇ ಬೃಹಸ್ಪತಿಯು. ವಾಕ್ಕೇ[1] ಬೃಹತೀ.[2] ಇವನು ಅದರ ಪತಿಯು.[3] ಆದುದರಿಂದ ಇವನು ಬೃಹಸ್ಪತಿಯು.[4]

[ಪ್ರಾಣನು ನಾಮವಾಗಿರುವ ಋಗ್ಯಜುಃಸಾಮಗಳಿಗೂ ಆತ್ಮನು ; ಪ್ರಾಣೋಪಾಸನೆಗಾಗಿ ಅವನು ಸರ್ವಾತ್ಮನು ಎಂದು ಶ್ರುತಿಯು ಅವನನ್ನು ಸ್ತುತಿಸಿದೆ.

1. 'ವಾಕ್ಕೇ ಅನುಷ್ಟುಪ್‌ಛಂದಸ್ಸು,' ವಾಗ್ವಾ ಅನುಷ್ಟುಪ್ ಎಂದು ತೈತ್ತಿರೀಯ ಸಂಹಿತೆಯಲ್ಲಿ (೧, ೩, ೫,) ಹೇಳಿದೆ ; ಇದು ಬೃಹತೀಛಂದಸ್ಸಿನಲ್ಲಿ ಅಂತರ್ಗತವಾಗಿದೆ.

2. ಬೃಹತೀಛಂದಸ್ಸಿನಲ್ಲಿ ಮೂವತ್ತಾರು ಅಕ್ಷರಗಳಿವೆ. ಇದರಲ್ಲಿ ಎಲ್ಲ ಋಕ್ಕುಗಳೂ ಅಂತರ್ಗತವಾಗಿವೆ ; ಏಕೆಂದರೆ ಬೃಹತಿಯನ್ನೇ ಪ್ರಾಣನೆಂದು ಹೊಗಳಿದೆ. ಐತರೇಯಾರಣ್ಯಕದಲ್ಲಿ (೨, ೨, ೨), 'ಪ್ರಾಣನೇ ಋಕ್ಕು ಎಂದು ತಿಳಿಯಬೇಕು' ಎಂದು ಹೇಳಿದೆ.

3. ಏಕೆಂದರೆ ಪ್ರಾಣದಿಂದಲೇ ವಾಗ್ರೂಪವಾಗಿರುವ ಋಕ್ಕುಗಳು ಹುಟ್ಟುತ್ತವೆ ; ಅಥವಾ ಪ್ರಾಣನು ವಾಕ್ಕನ್ನು ಪಾಲಿಸುವುದರಿಂದ ಅದರ ಪತಿಯು.

4. ಪ್ರಾಣನು ಋಕ್ಕುಗಳ ಆತ್ಮನು ಎಂದರ್ಥ.]

**ಏಷ ಉ ಏವ ಬ್ರಹ್ಮಣಸ್ಪತಿಃ; ವಾಗ್ವೈ ಬ್ರಹ್ಮ, ತಸ್ಯಾ ಏಷ ಪತಿಃ, ತಸ್ಮಾದು ಬ್ರಹ್ಮಣಸ್ಪತಿಃ ॥ ೨೧ ॥**

ಏಷಃ ಉ ಏವ=ಇವನೇ ಪುನಃ ಬ್ರಹ್ಮಣಸ್ಪತಿಃ=ಯಜುಸ್ಸಿನ ಪತಿಯು ; ವಾಕ್ ವೈ ಬ್ರಹ್ಮ=ವಾಕ್ಕೇ ಯಜುಸ್ಸು, ಏಷಃ ತಸ್ಯಾಃ ಪತಿಃ=ಇವನು ಅವಳ [ಅದರ] ಪತಿಯು, ತಸ್ಮಾತ್ ಉ ಬ್ರಹ್ಮಣಸ್ಪತಿಃ=ಆದುದರಿಂದ [ಇವನು] ಯಜುಸ್ಸಿನ ಪತಿಯು.

೨೧. ಪುನಃ ಇವನೇ ಯಜುಸ್ಸಿನ ಪತಿಯು. ವಾಕ್ಕೇ ಯಜುಸ್ಸು ಇವನು ಅದರ ಪತಿಯು. ಆದುದರಿಂದ ಇವನು ಯಜುಸ್ಸಿನ ಪತಿಯು.

**ಏಷ ಉ ಏವ ಸಾಮ; ವಾಗ್ವೈ ಸಾ, ಅಮೈಷ, ಸಾ ಚಾಮ ಚೇತಿ ತತ್ಸಾಮ್ನಃ ಸಾಮತ್ವಮ್ । ಯದ್ವೇವ ಸಮಃ ಪ್ಲುಷಿಣಾ ಸಮೋ ಮಶಕೇನ, ಸಮೋ ನಾಗೇನ, ಸಮ ಏಭಿಸ್ತ್ರಿಭಿರ್ಲೋಕೈಃ,**

ಸಮೋಽನೇನ ಸರ್ವೇಣ, ತಸ್ಮಾದ್ವೇವ ಸಾಮ; ಅಶ್ನುತೇ ಸಾಮ್ನಃ ಸಾಯುಜ್ಯಂ ಸಲೋಕತಾಂ ಯ ಏವಮೇತತ್ ಸಾಮ ವೇದ ॥ ೨೨ ॥

ಏಷಃ ಉ ಏವ ಸಾಮ=ಇವನೇ ಪುನಃ ಸಾಮ, ವಾಕ್ ವೈ ಸಾ=ವಾಕ್ಕೇ ಸಾ [ಅವಳು], ಏಷಃ ಅಮ=ಇವನು ಅಮ, ಸಾ ಚ ಅಮಃ ಚ ಇತಿ=ಯಾವ ಕಾರಣ ದಿಂದ ಅದು ಸಾ ಮತ್ತು ಅಮ ಆಗಿದೆಯೊ ತತ್=ಅದುದರಿಂದ ಸಾಮ್ನಃ=ಸಾಮದ ಸಾಮತ್ವಂ=ಸಾಮತ್ವ. ಯತ್ ಉ ಏವ=ಪುನಃ ಯಾವ ಕಾರಣದಿಂದ ಪ್ಲುಷಿಣಾ ಸಮಃ=ಗೆದ್ದಲಿಗೆ ಸಮಾನವೊ, ಮಶಕೇನ ಸಮಃ=ಸೊಳ್ಳೆಗೆ ಸಮಾನವೊ, ನಾಗೇನ ಸಮಃ=ಆನೆಗೆ ಸಮಾನವೊ, ಏಭಿಃ ತ್ರಿಭಿಃ ಲೋಕೈಃ ಸಮಃ=ಈ ಮೂರು ಲೋಕ ಗಳಿಗೂ ಸಮಾನವೊ, ಅನೇನ ಸರ್ವೇಣ ಸಮಃ=ಇದೆಲ್ಲಕ್ಕೂ ಸಮಾನವೊ, ತಸ್ಮಾತ್ ಉ ಏವ=ಆ ಕಾರಣದಿಂದಲೇ ಸಾಮ=ಸಾಮ; ಯಃ=ಯಾವನು ಏತತ್ ಸಾಮ= ಈ ಸಾಮವನ್ನು ಏವಂ=ಹೀಗೆ ವೇದ=ಅರಿಯುವನೊ [ಅವನು] ಸಾಮ್ನಃ=ಸಾಮ ದೊಂದಿಗೆ ಸಾಯುಜ್ಯಂ=ಸಾಯುಜ್ಯವನ್ನು ಸಲೋಕತಾಂ=ಸಾಲೋಕ್ಯವನ್ನು ಅಶ್ನುತೇ= ಪಡೆಯುತ್ತಾನೆ.

೨೨. ಪುನಃ ಇವನೇ ಸಾಮ. ವಾಕ್ಕೇ ಸಾ[1] ಮತ್ತು ಈ ಪ್ರಾಣನು ಅಮ.[2] (ಸಾಮವು) ಸಾ ಮತ್ತು ಅಮ ಆಗಿರುವುದರಿಂದ ಸಾಮವೆನಿಸಿದೆ.[3] ಅಥವಾ ಗೆದ್ದಲಿಗೆ[4] ಸಮಾನವಾಗಿರುವುದರಿಂದ, ಸೊಳ್ಳೆಗೆ ಸಮಾನವಾಗಿರು ವುದರಿಂದ, ಆನೆಗೆ ಸಮಾನವಾಗಿರುವುದರಿಂದ, ಈ ಮೂರು ಲೋಕಗಳಿಗೆ[5] ಸಮಾನವಾಗಿರುವುದರಿಂದ, ಇದೆಲ್ಲಕ್ಕೂ[6] ಸಮಾನವಾಗಿರುವುದರಿಂದ ಸಾಮ. ಯಾವನು ಸಾಮವನ್ನು ಹೀಗೆ ಅರಿಯುವನೊ ಅವನು ಸಾಮದೊಂದಿಗೆ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಪಡೆಯುತ್ತಾನೆ.

[[1] ಸ್ತ್ರೀಶಬ್ದಗಳಿಂದ ನಿರ್ದೇಶಿಸಲ್ಪಡುವ ವಸ್ತುಗಳೆಲ್ಲ ವಾಕ್ಕು; ಏಕೆಂದರೆ ಸಾ ಎಂಬ ಸರ್ವನಾಮಶಬ್ದಕ್ಕೆ ಸ್ತ್ರೀಶಬ್ದಗಳಿಂದ ಸೂಚಿಸಲ್ಪಡುವ ವಸ್ತುಗಳೆಲ್ಲವೂ ವಿಷಯವಾಗಿವೆ.

[2] ಅಮ ಎಂಬ ಶಬ್ದಕ್ಕೆ ಪುಂಶಬ್ದಗಳಿಂದ ಸೂಚಿಸಲ್ಪಡುವ ವಸ್ತುಗಳೆಲ್ಲವೂ ವಿಷಯ ವಾಗಿವೆ.

[3] ಸಾಮಶಬ್ದವು ವಾಕ್-ಪ್ರಾಣಗಳನ್ನು ಸೂಚಿಸುತ್ತದೆ. ಪ್ರಾಣದಿಂದ ಉತ್ಪನ್ನ ವಾಗುವ, ಸ್ವರಾದಿ ಸಮುದಾಯಮಾತ್ರವಾದ ಗೀತಿಗೂ ಸಾಮವೆಂದು ಹೆಸರು

[4] ಗೋವಿನಲ್ಲಿ ಗೋತ್ವವಿರುವಂತೆ ಪ್ರಾಣನು ಗೆದ್ದಲು ಮೊದಲಾದುವುಗಳ ಶರೀರ ಗಳಲ್ಲಿ ಸಂಪೂರ್ಣವಾಗಿ ಪರಿಸಮಾಪ್ತನಾಗಿರುವುದರಿಂದ ಸಮಾನನೇ ಹೊರತು ಶರೀರ ಪರಿಮಾಣದ ದೃಷ್ಟಿಯಿಂದಲ್ಲ.

[5]ಪ್ರಜಾಪತಿಯ ಶರೀರಕ್ಕೆ
[6]ಜಗದ್ವ್ಯಾಪಿಯಾದ ಹಿರಣ್ಯಗರ್ಭನಿಗೆ]

**ಏಷ ಉ ವಾ ಉದ್ಗೀಥಃ; ಪ್ರಾಣೋ ವಾ ಉತ್, ಪ್ರಾಣೇನ ಹೀದಂ ಸರ್ವಮುತ್ತಬ್ಧಂ, ವಾಗೇವ ಗೀಥಾ, ಉಚ್ಚ ಗೀಥಾ ಚೇತಿ ಸ ಉದ್ಗೀಥಃ ॥ ೨೩ ॥**

ಏಷಃ ಉ ವೈ ಉದ್ಗೀಥಃ=ಇವನೇ ಪುನಃ ಉದ್ಗೀಥ; ಪ್ರಾಣಃ ವೈ ಉತ್=ಪ್ರಾಣನೇ ಉತ್, ಹಿ=ಏಕೆಂದರೆ ಪ್ರಾಣೇನ=ಪ್ರಾಣನಿಂದ ಇದಂ ಸರ್ವಂ=ಇದೆಲ್ಲವೂ ಉತ್ತಬ್ಧಂ=ಎತ್ತಿಹಿಡಿಯಲ್ಪಟ್ಟಿದೆ, ವಾಕ್ ಏವ=ವಾಕ್ಕೇ ಗೀಥಾ=ಗೀಥೆ, ಉತ್ ಚ ಗೀಥಾ ಚ=ಉತ್ ಮತ್ತು ಗೀಥೆಯೂ ಆಗಿರುವುದರಿಂದ ಸಃ=ಅವನು, ಪ್ರಾಣನು ಉದ್ಗೀಥಃ=ಉದ್ಗೀಥ.

೨೩. ಪುನಃ ಇವನೇ ಉದ್ಗೀಥ[1]. ಪ್ರಾಣನೇ ಉತ್[2], ಏಕೆಂದರೆ ಪ್ರಾಣನಿಂದಲೇ ಇದೆಲ್ಲವೂ ಎತ್ತಿಹಿಡಿಯಲ್ಪಟ್ಟಿದೆ, ವಾಕ್ಕೇ ಗೀಥೆ[3]. ಪ್ರಾಣನು ಉತ್ ಮತ್ತು ಗೀಥೆಯೂ ಆಗಿರುವುದರಿಂದ ಅವನು ಉದ್ಗೀಥ.

[[1]ಗಾನಕರ್ಮವಲ್ಲ, ಸಾಮದ ಅವಯವವಾದ ಒಂದು ಭಾಗವಿಶೇಷ.
[2]ಉಚ್ಛಬ್ದವು ಪ್ರಾಣನ ಒಂದು ಗುಣವನ್ನು ನಿರ್ದೇಶಿಸುತ್ತದೆ.
[3]ಗೈ ಧಾತುವಿನಿಂದ ಉತ್ಪನ್ನವಾದ ಈ ಪದವು ಶಬ್ದವನ್ನು ಸೂಚಿಸುತ್ತದೆ.]

**ತದ್ಧಾಪಿ ಬ್ರಹ್ಮದತ್ತಶ್ಚೈಕಿತಾನೇಯೋ ರಾಜಾನಂ ಭಕ್ಷಯನ್ನುವಾಚ, ಅಯಂ ತ್ಯಸ್ಯ ರಾಜಾ ಮೂರ್ಧಾನಂ ವಿಪಾತಯತಾತ್, ಯದಿತೋಽಯಾಸ್ಯ ಆಂಗಿರಸೋಽನ್ಯೇನೋದಗಾಯದಿತಿ, ವಾಚಾ ಚ ಹ್ಯೇವ ಸ ಪ್ರಾಣೇನ ಚೋದಗಾಯದಿತಿ ॥ ೨೪ ॥**

ತತ್ ಹ=ಈ ವಿಷಯದಲ್ಲಿ [ಒಂದು ಆಖ್ಯಾಯಿಕೆ] ಅಪಿ=ಕೂಡ[ಇದೆ]: ಚೈಕಿತಾನೇಯಃ=ಚಿಕಿತಾನನ ಪೌತ್ರನಾದ ಬ್ರಹ್ಮದತ್ತಃ ಬ್ರಹ್ಮದತ್ತನು ರಾಜಾನಂ=ಸೋಮವನ್ನು ಭಕ್ಷಯನ್=ಪಾನಮಾಡುತ್ತ ಉವಾಚ=ಹೇಳಿದನು, ಇತಃ=ಇದಕ್ಕಿಂತ ಅನ್ಯೇನ=ಬೇರೆಯಾದ[ದೇವತೆಯಿಂದ]ಅಯಾಸ್ಯಃ ಆಂಗಿರಸಃ=ಅಯಾಸ್ಯ ಆಂಗಿರಸನು ಉದಗಾಯತ್ ಯತ್ [ಯದಿ]=ಉದ್ಗೀಥವನ್ನು ಹಾಡಿದ್ದರೆ ಅಯಂ ರಾಜಾ=ಈ ಸೋಮವು ತ್ಯಸ್ಯ [ತಸ್ಯ]=ಅಂತಹ ನನ್ನ ಮೂರ್ಧಾನಂ=ತಲೆಯನ್ನು ವಿಪಾತಯತಾತ್=ಹೊಡೆದು ಕೆಡವಲಿ ಇತಿ=ಎಂದು; ಸಃ=ಅವನು ಹಿ=ದಿಟವಾಗಿ ವಾಚಾ ಚ ಏವ=ವಾಕ್ಕಿನಿಂದಲೂ ಪ್ರಾಣೇನ ಚ=ಪ್ರಾಣನಿಂದಲೂ ಉದಗಾಯತ್=ಹಾಡಿದನು ಇತಿ=ಎಂದು.

೨೪. ಈ ವಿಷಯದಲ್ಲಿ (ಒಂದು ಆಖ್ಯಾಯಿಕೆ) ಕೂಡ (ಇದೆ) ಚಿಕಿತಾನನ ಪೌತ್ರನಾದ ಬ್ರಹ್ಮದತ್ತನು (ಯಜ್ಞದಲ್ಲಿ) ಸೋಮಪಾನ ಮಾಡುತ್ತ, 'ಇದಕ್ಕಿಂತ[1] ಬೇರೆಯಾದ (ದೇವತೆಯಿಂದ) ಅಯಾಸ್ಯ ಆಂಗಿರಸನು[2] ಉದ್ಗೀಥವನ್ನು ಹಾಡಿದ್ದರೆ ಈ ಸೋಮವು ಅಂತಹ ನನ್ನ ತಲೆಯನ್ನು[3] ಕೆಡವಲಿ'[4] ಎಂದು ಹೇಳಿದನು. ಅವನು ದಿಟವಾಗಿ (ಪ್ರಾಣಪ್ರಧಾನವಾಗಿರುವ) ವಾಕ್ಕಿನ ಮೂಲಕ ಮತ್ತು (ತನ್ನ ಆತ್ಮನಾದ) ಪ್ರಾಣನ ಮೂಲಕ ಉದ್ಗೀಥವನ್ನು ಹಾಡಿದನು.

[[1] ಈವಾಕ್ಕಿನೊಂದಿಗೆ ಕೂಡಿರುವ ಪ್ರಾಣನಿಗಿಂತ.

[2] ಮುಖ್ಯಪ್ರಾಣನು, ಇವನು ವಿಶ್ವವನ್ನು ಸೃಷ್ಟಿಸಿದ ಪೂರ್ವರ್ಷಿಗಳ ಸತ್ರದಲ್ಲಿ ಉದ್ಗೀಥವನ್ನು ಹಾಡಿದ್ದನು.

[3] ದೇವತೆಯನ್ನು ವಿಪರೀತವಾಗಿ ತಿಳಿದುಕೊಂಡ ಆ ನನ್ನ ತಲೆಯನ್ನು.

[4] ನಾನು ಅನೃತವಾದಿಯಾಗಿದ್ದರೆ, ಎಂದರ್ಥ.]

**ತಸ್ಯ ಹೈತಸ್ಯ ಸಾಮ್ನೋ ಯಃ ಸ್ವಂ ವೇದ ಭವತಿ ಹಾಸ್ಯ ಸ್ವಂ; ತಸ್ಯ ವೈ ಸ್ವರ ಏವ ಸ್ವಂ, ತಸ್ಮಾದಾರ್ತ್ವಿಜ್ಯಂ ಕರಿಷ್ಯನ್ ವಾಚಿ ಸ್ವರಮಿಚ್ಛೇತ, ತಯಾ ವಾಚಾ ಸ್ವರಸಂಪನ್ನಯಾರ್ತ್ವಿಜ್ಯಂ ಕುರ್ಯಾತ್; ತಸ್ಮಾದ್ಯಜ್ಞೇ ಸ್ವರವಂತಂ ದಿದೃಕ್ಷಂತ ಏವ, ಅಥೋ ಯಸ್ಯ ಸ್ವಂ ಭವತಿ; ಭವತಿ ಹಾಸ್ಯ ಸ್ವಂ ಯ ಏವಮೇತತ್ಸಾಮ್ನಃ ಸ್ವಂ ವೇದ ॥ ೨೫ ॥**

ಯಃ=ಯಾವನು ತಸ್ಯ ಹ ಏತಸ್ಯ ಸಾಮ್ನಃ=ಆ ಈ ಸಾಮದ ಸ್ವಂ=ಸಂಪತ್ತನ್ನು ವೇದ=ಅರಿಯುವನೊ ತಸ್ಯ=ಅವನಿಗೆ ಸ್ವಂ ಭವತಿ ಹ=ಸಂಪತ್ತು ಉಂಟಾಗುವುದು; ತಸ್ಯ ವೈ=ಅದಕ್ಕೆ ಸ್ವರಃ ಏವ=ಸ್ವರವೇ ಸ್ವಂ=ಸಂಪತ್ತು, ತಸ್ಮಾತ್=ಆದುದರಿಂದ ಆರ್ತ್ವಿಜ್ಯಂ=ಋತ್ವಿಕ್ಕರ್ಮವನ್ನು ಕರಿಷ್ಯನ್=ಮಾಡುವವನು ವಾಚಿ=ವಾಕ್ಕಿನಲ್ಲಿ ಸ್ವರಂ=ಸುಸ್ವರವನ್ನು ಇಚ್ಛೇತ=ಬಯಸಬೇಕು, ತಯಾ ಸ್ವರಸಂಪನ್ನಯಾ ವಾಚಾ=ಆ ಸ್ವರಸೌಷ್ಠವದಿಂದ ಕೂಡಿದ ವಾಕ್ಕಿನಿಂದ ಆರ್ತ್ವಿಜ್ಯಂ=ಋತ್ವಿಕ್ಕರ್ಮವನ್ನು ಕುರ್ಯಾತ್=ಮಾಡಬೇಕು, ತಸ್ಮಾತ್=ಆದುದರಿಂದ ಯಜ್ಞೇ=ಯಜ್ಞದಲ್ಲಿ ಸ್ವರವಂತಂ=ಸ್ವರವಂತನನ್ನು ದಿದೃಕ್ಷಂತೇ=ನೋಡಲು ಬಯಸುತ್ತಾರೆ; ಅಥ ಉ=ಮತ್ತು ಯಸ್ಯ=ಯಾವನಿಗೆ ಸ್ವಂ ಭವತಿ=ಸಂಪತ್ತು ಉಂಟಾಗುವುದೊ [ತಂ ದಿದೃಕ್ಷಂತೇ=ಅವನನ್ನು ನೋಡಲು ಬಯಸು

ತ್ತಾರೆ] ; ಯಃ=ಯಾವನು ಏವಂ=ಹೀಗೆ ಸಾಮ್ನಃ=ಸಾಮದ ಏತತ್=ಈ ಸ್ವಂ=ಸಂಪತ್ತನ್ನು ವೇದ=ಅರಿಯುವನೊ ಅಸ್ಯ=ಅವನಿಗೆ ಸ್ವಂ ಭವತಿ ಹ=ಸಂಪತ್ತು ಉಂಟಾಗುವುದು.

೨೫. ಯಾವನು ಆ ಈ ಸಾಮದ[1] ಸಂಪತ್ತನ್ನು ಅರಿಯುವನೊ ಅವನಿಗೆ ಸಂಪತ್ತು ಉಂಟಾಗುವುದು. ಸ್ವರವೇ[2] ಅದರ ಸಂಪತ್ತು. ಆದುದರಿಂದ (ಉದ್ಗಾನವೆಂಬ) ಋತ್ವಿಕ್ಕರ್ಮವನ್ನು ಮಾಡುವವನು ವಾಕ್ಕಿನಲ್ಲಿ ಸುಸ್ವರವನ್ನು ಬಯಸಬೇಕು, ಮತ್ತು ಸ್ವರಸೌಷ್ಠವದಿಂದ ಕೂಡಿದ ಆ ವಾಕ್ಕಿನಿಂದ ಋತ್ವಿಕ್ಕರ್ಮವನ್ನು ಮಾಡಬೇಕು. ಆದುದರಿಂದ ಯಜ್ಞದಲ್ಲಿ ಸ್ವರವಂತನನ್ನು ನೋಡಲು (ಜನರು) ಬಯಸುತ್ತಾರೆ; ಹಾಗೆಯೇ ಧನಿಕನನ್ನು (ನೋಡಲು ಜನರು ಬಯಸುತ್ತಾರೆ). ಯಾವನು ಸಾಮದ ಈ ಸಂಪತ್ತನ್ನು ಹೀಗೆ ಅರಿಯುವನೊ ಅವನಿಗೆ ಸಂಪತ್ತು ಉಂಟಾಗುವುದು.

[[1]ಸಾಮಶಬ್ದವಾಚ್ಯನಾದ ಪ್ರಾಣನ.

[2]ಕಂಠದಲ್ಲಿರುವ ಮಾಧುರ್ಯ, ಇದೇ ಸಾಮದ ಭೂಷಣ. ಇದರಿಂದ ಭೂಷಿತವಾಗಿ ಉದ್ಗಾನವು ಋದ್ಧಿಯುಕ್ತವಾಗಿರುತ್ತದೆ.]

**ತಸ್ಯ ಹೈತಸ್ಯ ಸಾಮ್ನೋ ಯಃ ಸುವರ್ಣಂ ವೇದ, ಭವತಿ ಹಾಸ್ಯ ಸುವರ್ಣಂ; ತಸ್ಯ ವೈ ಸ್ವರ ಏವ ಸುವರ್ಣಂ; ಭವತಿ ಹಾಸ್ಯ ಸುವರ್ಣಂ ಯ ಏವಮೇತತ್ಸಾಮ್ನಃ ಸುವರ್ಣಂ ವೇದ ॥ ೨೬ ॥**

ಸುವರ್ಣಂ=ಸುವರ್ಣವನ್ನು. [ಇತರ ಪದಗಳ ಅನ್ವಯಾರ್ಥ ಹಿಂದಿನಂತೆಯೆ.]

೨೬. ಯಾವನು ಆ ಈ ಸಾಮದ ಸುವರ್ಣವನ್ನು[1] ಅರಿಯುವನೊ ಅವನಿಗೆ ಸುವರ್ಣ ಉಂಟಾಗುವುದು. ಸ್ವರವೇ ಅದರ ಸುವರ್ಣ. ಯಾವನು ಸಾಮದ ಈ ಸುವರ್ಣವನ್ನು ಹೀಗೆ ಅರಿಯುವನೊ ಅವನಿಗೆ ಸುವರ್ಣ ಉಂಟಾಗುವುದು.

[ಇಲ್ಲಿ ಇನ್ನೊಂದು ಗುಣದ ಉಪಾಸನೆಯನ್ನು ವಿಧಿಸಿದೆ.

[1] ಸರಿಯಾದ ವರ್ಣೋಚ್ಚಾರಣ.]

**ತಸ್ಯ ಹೈತಸ್ಯ ಸಾಮ್ನೋ ಯಃ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತಿ; ತಸ್ಯ ವೈ ವಾಗೇವ ಪ್ರತಿಷ್ಠಾ, ವಾಚಿ ಹಿ ಖಲ್ವೇಷ ಏತತ್ ಪ್ರಾಣಃ ಪ್ರತಿಷ್ಠಿತೋ ಗೀಯತೇ; ಅನ್ನ ಇತ್ಯುಹೈಕ ಆಹುಃ ॥ ೨೭ ॥**

ಯಃ=ಯಾವನು ತಸ್ಯ ಹ ಏತಸ್ಯ ಸಾಮ್ನಃ=ಆ ಈ ಸಾಮದ ಪ್ರತಿಷ್ಠಾಂ=ಆಶ್ರಯವನ್ನು ವೇದ=ಅರಿಯುವನೊ ಪ್ರತಿತಿಷ್ಠತಿ=ಆಶ್ರಯವನ್ನು ಪಡೆಯುತ್ತಾನೆ; ತಸ್ಯ ವೈ=ಅದಕ್ಕೆ ವಾಕ್ ಏವ=ವಾಕ್ಕೇ ಪ್ರತಿಷ್ಠಾ=ಆಶ್ರಯ; ಹಿ=ಏಕೆಂದರೆ ಏಷಃ ಪ್ರಾಣಃ=ಈ ಪ್ರಾಣನು ವಾಚಿ ಖಲು=ವಾಕ್ಕಿನಲ್ಲಿಯೇ ಪ್ರತಿಷ್ಠಿತಃ=ಪ್ರತಿಷ್ಠಿತನಾಗಿ ಏತತ್ ಗೀಯತೇ=ಹೀಗೆ ಹಾಡಲ್ಪಡುತ್ತಾನೆ; ಏಕೇ=ಕೆಲವರು ಅನ್ನೇ=ಅನ್ನದಲ್ಲಿ [ಪ್ರತಿಷ್ಠಿತಃ=ಪ್ರತಿಷ್ಠಿತನಾಗಿ ಗೀಯತೇ=ಹಾಡಲ್ಪಡುತ್ತಾನೆ]; ಇತಿ ಹ ಉ ಆಹುಃ=ಎಂದು ಹೇಳುತ್ತಾರೆ.

೨೭. ಯಾವನು ಆ ಈ ಸಾಮದ ಆಶ್ರಯವನ್ನು ಅರಿಯುವನೊ ಅವನು ಆಶ್ರಯವನ್ನು ಪಡೆಯುತ್ತಾನೆ.[1] ವಾಕ್ಕೇ[2] ಅದರ ಆಶ್ರಯ. ಏಕೆಂದರೆ ವಾಕ್ಕಿನಲ್ಲಿಯೇ ಪ್ರತಿಷ್ಠಿತನಾಗಿ ಈ ಪ್ರಾಣನು ಹಾಡಲ್ಪಡುತ್ತಾನೆ.[3] ಅನ್ನದಲ್ಲಿ (ಪ್ರತಿಷ್ಠಿತನಾಗಿ ಹಾಡಲ್ಪಡುವನು) ಎಂದು ಕೆಲವರು ಹೇಳುತ್ತಾರೆ.

[ಇಲ್ಲಿ ಪ್ರಾಣನ ಪ್ರತಿಷ್ಠಾಗುಣವನ್ನು ಉಪಾಸನೆಗಾಗಿ ವಿಧಿಸಿದೆ.

[1] 'ಅವನನ್ನು ಹೇಗೆ ಉಪಾಸಿಸುವನೊ (ಹಾಗೆಯೇ ಆಗುವನು)' ತಂ ಯಥಾ ಯಥೋಪಾಸತೇ ಎಂದು ಶತಪಥಬ್ರಾಹ್ಮಣದಲ್ಲಿ (೧೦, ೫, ೨, ೨೦) ಹೇಳಿದೆ.

[2] ಜಿಹ್ವಾಮೂಲ, ವಕ್ಷ, ಶಿರ, ಕಂಠ ಮೊದಲಾದ ಸ್ಥಾನಗಳು

[3] ಎಂದರೆ ಗೀತಿಭಾವವನ್ನು ಪಡೆಯುತ್ತಾನೆ]

ಅಥಾತಃ ಪವಮಾನಾನಾಮೇವಾಭ್ಯಾರೋಹಃ; ಸ ವೈ ಖಲು ಪ್ರಸ್ತೋತಾ ಸಾಮ ಪ್ರಸ್ತೌತಿ, ಸ ಯತ್ರ ಪ್ರಸ್ತುಯಾತ್ ತದೇತಾನಿ ಜಪೇತ್–ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾಮೃತಂ ಗಮಯೇತಿ; ಸ ಯದಾಹಾಸತೋ ಮಾ ಸದ್ಗಮಯೇತಿ, ಮೃತ್ಯುರ್ವಾ ಅಸತ್, ಸದಮೃತಂ, ಮೃತ್ಯೋರ್ಮಾಮೃತಂ ಗಮಯ, ಅಮೃತಂ ಮಾ ಕುರ್ವಿತ್ಯೇವೈತದಾಹ; ತಮಸೋ ಮಾ ಜ್ಯೋತಿರ್ಗಮಯೇತಿ, ಮೃತ್ಯುರ್ವೈ ತಮಃ, ಜ್ಯೋತಿರಮೃತಂ, ಮೃತ್ಯೋರ್ಮಾಮೃತಂ ಗಮಯ ಅಮೃತಂ ಮಾ ಕುರ್ವಿತ್ಯೇವೈತದಾಹ; ಮೃತ್ಯೋರ್ಮಾಮೃತಂ ಗಮಯೇತಿ ನಾತ್ರ ತಿರೋಹಿತಮಿವಾಸ್ತಿ। ಅಥ ಯಾನೀತರಾಣಿ ಸ್ತೋತ್ರಾಣಿ ತೇಷ್ವಾತ್ಮನೇಽನ್ನಾದ್ಯಮಾಗಾಯೇತ್, ತಸ್ಮಾದು ತೇಷು ವರಂ ವೃಣೀತ ಯಂ ಕಾಮಂ ಕಾಮಯೇತ

**ತಂ; ಸ ಏಷ ಏವಂವಿದುದ್ಗಾತಾತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ; ತದ್ಧೈತಲ್ಲೋಕಜಿದೇವ; ನ ಹೈವಾಲೋಕ್ಯತಾಯಾ ಆಶಾಸ್ತಿ ಯ ಏವಮೇತತ್ ಸಾಮ ವೇದ ॥೨೮॥ ಇತಿ ತೃತೀಯಂ ಬ್ರಾಹ್ಮಣಮ್॥**

ಅಥ=ಈಗ ಅತಃ=ಆದುದರಿಂದ ಪವಮಾನಾನಾಂ ಏವ=ಕೇವಲ ಪವಮಾನಗಳ ಅಭ್ಯಾರೋಹಃ=ಅಭ್ಯಾರೋಹ: ಸಃ ವೈ ಖಲು ಪ್ರಸ್ತೋತಾ=ಆ ಪ್ರಸ್ತೋತೃವೇ ಸಾಮ=ಸಾಮವನ್ನು ಪ್ರಸ್ತೌತಿ=ಪ್ರಸ್ತಾವ ಮಾಡುತ್ತಾನೆ; ಸಃ=ಅವನು ಯತ್ರ=ಯಾವಾಗ ಪ್ರಸ್ತುಯಾತ್=ಪ್ರಸ್ತಾವ ಮಾಡುತ್ತಾನೆಯೋ ತತ್=ಆಗ ಏತಾನಿ=ಈ [ಮೂರು ಯಜುರ್ಮಂತ್ರಗಳನ್ನು] ಜಪೇತ್=ಜಪಿಸಬೇಕು · ಅಸತಃ=ಅಸತ್ತಿನಿಂದ ಮಾ=ನನ್ನನ್ನು ಗತ್=ಸದ್ವಸ್ತುವಿಗೆ ಗಮಯ=ಕರೆದುಕೊಂಡು ಹೋಗು, ತಮಸಃ=ತಮಸ್ಸಿನಿಂದ ಮಾ=ನನ್ನನ್ನು ಜ್ಯೋತಿಃ=ಜ್ಯೋತಿಗೆ ಗಮಯ=ಕರೆದುಕೊಂಡುಹೋಗು ಮೃತ್ಯೋಃ=ಮೃತ್ಯುವಿನಿಂದ ಮಾ=ನನ್ನನ್ನು ಅಮೃತಂ=ಅಮೃತಕ್ಕೆ ಗಮಯ ಕರೆದುಕೊಂಡು ಹೋಗು ಇತಿ=ಎಂದು; ಸಃ=ಆ ಮಂತ್ರವು ಯತ್=ಯಾವಾಗ ಆಹ=ಹೇಳುತ್ತದೆಯೊ 'ಅಸತಃ ಮಾ ಸತ್ ಗಮಯ' ಇತಿ ಎಂದು [ಅಲ್ಲಿ] ಮೃತ್ಯುಃ ವೈ=ಮೃತ್ಯುವೇ ಅಸತ್=ಅಸದ್ವಸ್ತುವು, ಸತ್=ಸದ್ವಸ್ತುವು ಅಮೃತಂ=ಅಮೃತ, [ಆದುದರಿಂದ] 'ಮೃತ್ಯೋಃ ಮಾ ಅಮೃತಂ ಗಮಯ' [ಎಂದರೆ] ಮಾ ಅಮೃತಂ ಕುರು=ನನ್ನನ್ನು ಅಮೃತನನ್ನಾಗಿ ಮಾಡು ಇತಿ ಏವ=ಎಂದೇ ಏತತ್=ಹೀಗೆ ಆಹ=ಹೇಳುತ್ತದೆ, 'ತಮಸಃ ಮಾ ಜ್ಯೋತಿಃ ಗಮಯ' ಇತಿ [ಎಂದು ಹೇಳಿದಾಗ ಅಲ್ಲಿ] ಮೃತ್ಯುಃ ವೈ ತಮಃ=ಮೃತ್ಯುವೇ ತಮಸ್ಸು, ಜ್ಯೋತಿಃ ಅಮೃತಂ=ಜ್ಯೋತಿಯು ಅಮೃತ; [ಆದುದರಿಂದ] 'ಮೃತ್ಯೋಃ ಮಾ ಅಮೃತಂ ಗಮಯ' [ಎಂದರೆ] ಮಾ ಅಮೃತಂ ಕುರು ಇತಿ ಏವ ಏತತ್ ಆಹ; 'ಮೃತ್ಯೋಃ ಮಾ ಅಮೃತಂ ಗಮಯ' ಇತಿ ಅತ್ರ=ಎಂಬಲ್ಲಿ ತಿರೋಹಿತಂ ಇವ=ಮರೆಯಾದಂತಿರುವುದ ನ ಅಸ್ತಿ [ಯಾವುದೂ] ಇಲ್ಲ. ಅಥ=ಇನ್ನು ಯಾನಿ ಇತರಾಣಿ ಸ್ತೋತ್ರಾಣಿ=ಯಾವ ಬೇರೆ ಸ್ತೋತ್ರಗಳಿವೆಯೋ ತೇಷು=ಅವುಗಳಲ್ಲಿ [ಉದ್ಗಾತೃವು] ಆತ್ಮನೇ=ತನಗಾಗಿ ಅನ್ನಾದ್ಯಂ=ತಿನ್ನತಕ್ಕ ಅನ್ನವನ್ನು ಆಗಾಯೇತ್=ಹಾಡಿ ಪಡೆದುಕೊಳ್ಳಬೇಕು, [ಏಕೆಂದರೆ] ಸಃ ಏಷು ಎವಂವಿತ್ ಉದ್ಗಾತಾ=ಹೀಗೆ ಅರಿತುಕೊಂಡ ಈ ಉದ್ಗಾತೃವು ಆತ್ಮನೇ ವಾ=ತನಗಾಗಿ ಯಜಮಾನನಿಗಾಗಿ ಯಂ ಕಾಮಂ ಕಾಮಯತೇ=ಯಾವ ಕಾಮವನ್ನು ಬಯಸುವನೊ ತಂ ಆಗಾಯತಿ=ಅದನ್ನು ಹಾಡಿ ಪಡೆಯುತ್ತಾನೆ; ತಸ್ಮಾತ್ ಉ=ಆದುದರಿಂದ [ಯಜಮಾನನು] ತೇಷು=ಅವುಗಳಲ್ಲಿ, ಸ್ತೋತ್ರಗಳನ್ನು ಪ್ರಯೋಗಿಸುವಾಗ ಯಂ=ಯಾವ ಕಾಮಂ=ವರವನ್ನು ಕಾಮಯೇತ=ಬಯಸುತ್ತಾನೆಯೊ ತಂ ವರಂ=ಆ ವರವನ್ನು ವೃಣೀತ=ಕೇಳಬೇಕು; ತತ್ ಹ ಏತತ್=ಆ ಈ [ಉಪಾಸನೆಯು] ಲೋಕ=

ಜಿತ್ ಏವ=ದಿಟವಾಗಿ [ಹಿರಣ್ಯಗರ್ಭ] ಲೋಕವನ್ನು ಸಂಪಾದಿಸುತ್ತದೆ, ಯಃ=ಯಾವನು ಏವಮ್=ಹೀಗೆ ಏತತ್ ಸಾಮ=ಈ ಸಾಮವನ್ನು ವೇದ=ತಿಳಿದಿರುವನೊ [ಅವನಿಗೆ] ಅಲೋಕ್ಯತಾಯಾಃ ಆಶಾ=ಲೋಕಸಂಪಾದನೆ ಆಗುವುದಿಲ್ಲವೆಂಬ ಭಯ ಅಥವಾ ಆತಂಕ ನ ಹ ಏವ ಅಸ್ತಿ=ಇರುವುದೇ ಇಲ್ಲ.

೨೮. ಈಗ ಆದುದರಿಂದ ಕೇವಲ ಪವಮಾನ ಸ್ತೋತ್ರಗಳ[1] ಅಭ್ಯಾರೋಹ:[2] ಆ ಪ್ರಸ್ತೋತೃವೇ ಸಾಮಗಾನ ಮಾಡುತ್ತಾನೆ. ಅವನು ಗಾನ ಮಾಡುವ ಸಂದರ್ಭದಲ್ಲಿ ಈ (ಮೂರು ಯಜುರ್ಮಂತ್ರಗಳನ್ನು) ಜಪಿಸಬೇಕು—'ಅಸತ್ತಿನಿಂದ ಸದ್ವಸ್ತುವಿಗೆ ನನ್ನನ್ನು ಕರೆದುಕೊಂಡು ಹೋಗು, ತಮಸ್ಸಿನಿಂದ ಜ್ಯೋತಿಗೆ ನನ್ನನ್ನು ಕರೆದುಕೊಂಡು ಹೋಗು, ಮೃತ್ಯುವಿನಿಂದ ಅಮೃತಕ್ಕೆ ನನ್ನನ್ನು ಕರೆದುಕೊಂಡು ಹೋಗು.' 'ಅಸತೋ ಮಾ ಸದ್ಗಮಯ' ಎಂದು ಮಂತ್ರವು ಹೇಳುವಾಗ, ಅಲ್ಲಿ ಅಸತ್[3] ಮೃತ್ಯುವೇ,[4] ಸತ್[5] ಎಂದರೆ ಅಮೃತ; (ಆದುದರಿಂದ) 'ಮೃತ್ಯುವಿನಿಂದ ಅಮೃತಕ್ಕೆ ನನ್ನನ್ನು ಕರೆದುಕೊಂಡು ಹೋಗು'[6] ಎಂದರೆ, 'ನನ್ನನ್ನು ಅಮೃತನನ್ನಾಗಿ ಮಾಡು' ಎಂದು ಮಂತ್ರವು ಹೇಳುತ್ತದೆ. 'ತಮಸೋ ಮಾ ಜ್ಯೋತಿರ್ಗಮಯ' ಎಂಬ ಮಂತ್ರದಲ್ಲಿ ತಮಸ್[7] ಎಂದರೆ ಮೃತ್ಯುವೇ, ಜ್ಯೋತಿ[8] ಎಂದರೆ ಅಮೃತ, (ಆದುದರಿಂದ) 'ಮೃತ್ಯುವಿನಿಂದ ಅಮೃತಕ್ಕೆ ನನ್ನನ್ನು ಕರೆದುಕೊಂಡು ಹೋಗು'[9] ಎಂದರೆ, 'ನನ್ನನ್ನು ಅಮೃತನನ್ನಾಗಿ ಮಾಡು' ಎಂದು ಹೇಳುತ್ತದೆ. 'ಮೃತ್ಯೋರ್ಮಾಮೃತಂ ಗಮಯ' ಎಂಬಲ್ಲಿ (ಅರ್ಥವು) ಮರೆಯಾದಂತೆ ಕಾಣುವುದಿಲ್ಲ. ಅನಂತರ ಬೇರೆ(ಎಂದರೆ ಉಳಿದ) ಸ್ತೋತ್ರಗಳ ಮೂಲಕ (ಉದ್ಗಾತೃವು) ತನಗಾಗಿ ತಿನ್ನತಕ್ಕ ಅನ್ನವನ್ನು ಹಾಡಿ ಪಡೆದುಕೊಳ್ಳಬೇಕು. (ಏಕೆಂದರೆ) ಹೀಗೆ ಅರಿತುಕೊಂಡ ಆ ಈ ಉದ್ಗಾತೃವು ತನಗಾಗಿ ಅಥವಾ ಯಜಮಾನನಿಗಾಗಿ ಯಾವ ವರವನ್ನು ಬಯಸುವನೊ ಅದನ್ನು ಹಾಡಿ ಪಡೆಯುತ್ತಾನೆ; ಆದುದರಿಂದ (ಉದ್ಗಾತೃವು) ಆ ಸ್ತೋತ್ರಗಳನ್ನು ಪ್ರಯೋಗಿಸುತ್ತಿರುವಾಗ (ಯಜಮಾನನ್ನು ತನಗೆ ಬೇಕಾದ ವರವನ್ನು ಕೇಳಿಕೊಳ್ಳಬೇಕು. ಆ ಈ (ಉಪಾಸನೆಯು) ದಿಟವಾಗಿ (ಹಿರಣ್ಯಗರ್ಭ) ಲೋಕವನ್ನು ಸಂಪಾದಿಸುತ್ತದೆ.[10] ಯಾವನು ಹೀಗೆ ಈ ಸಾಮವನ್ನು ತಿಳಿದಿರುವನೊ[11] (ಅವನಿಗೆ) ಈ ಲೋಕಸಂಪಾದನೆ

ಆಗುವುದಿಲ್ಲವೆಂಬ ಆತಂಕ ಅಥವಾ ಶಂಕೆ ಇರುವುದೇ ಇಲ್ಲ.[12]

[ಪ್ರಾಣೋಪಾಸಕನಿಗೆ ಈಗ ಜಪಕರ್ಮವನ್ನು ವಿಧಿಸಿದೆ.

1 ೧, ೩, ೨೮ ೨ನೆಯ ಟಿಪ್ಪಣಿಯನ್ನು ನೋಡಿ.

2 ಪ್ರಸ್ತೋತೃವು ಸಾಮವನ್ನು ಹಾಡಲು ಪ್ರಾರಂಭಿಸಿದಾಗ ಈ ಮೂರು ಯಜು-ರ್ಮಂತ್ರಗಳನ್ನು ಜಪಿಸಬೇಕು; ಈ ಜಪಕ್ಕೆ ಅಭ್ಯಾರೋಹವೆಂದು ಹೆಸರು. ಈ ಜಪದ ಮೂಲಕ ತನ್ನನ್ನು ದೇವಭಾವಕ್ಕೆ ಅಭಿಮುಖವಾಗಿ ಏರುವಂತೆ ಮಾಡುವನಾದುದ ರಿಂದ 'ಅಭ್ಯಾರೋಹ' ಎಂದು ಎನಿಸಿದೆ, ಅಭಿಮುಖ್ಯೇನ ಆರೋಹತಿ ಅನೇನ ಜಪ-ಕರ್ಮಣಾ ಏವಂವಿತ್ ದೇವಭಾವಮಾತ್ಮಾನಂ ಇತಿ ಅಭ್ಯಾರೋಹಃ.

3 ಅತ್ಯಂತ ಅಧೋಭಾವಕ್ಕೆ ಕಾರಣವಾದುದರಿಂದ ಅಸತ್ತು.

4 ನಮ್ಮ ಸ್ವಭಾವಕ್ಕೆ ಅನುಗುಣವಾದ ಜ್ಞಾನ ಮತ್ತು ಕರ್ಮ.

5 ಶಾಸ್ತ್ರೀಯವಾದ ಕರ್ಮಜ್ಞಾನಗಳು.

6 'ಅಸತ್ತಾದ ಕರ್ಮಜ್ಞಾನಗಳಿಂದ ಶಾಸ್ತ್ರೀಯವಾದ ಕರ್ಮಜ್ಞಾನಗಳಿಗೆ ನನ್ನನ್ನು ಕರೆದುಕೊಂಡು ಹೋಗು, ದೇವಭಾವಕ್ಕೆ ಸಾಧನವಾದ ಅವುಗಳೊಂದಿಗೆ ನಾನು ತಾದಾತ್ಮ್ಯವನ್ನು ಪಡೆಯಲಿ ಎಂದರ್ಥ.

7 ಮರೆಮಾಡುವುದರಿಂದ ಅಜ್ಞಾನವೆಲ್ಲಾ ತಮಸ್ಸು ಮರಣಕ್ಕೆ ಕಾರಣವಾದುದ ರಿಂದ ಮೃತ್ಯುವೆನಿಸಿದೆ.

8 ಅಜ್ಞಾನಕ್ಕೆ ವಿರುದ್ಧವಾಗಿರುವ ದೈವಸ್ವರೂಪ, ಜ್ಞಾನವು ಪ್ರಕಾಶರೂಪವಾಗಿ ರುವುದರಿಂದ ಜ್ಯೋತಿ ಎನಿಸಿದೆ; ಅವಿನಾಶಾತ್ಮಕವಾದುದರಿಂದ ಅಮೃತ.

9 'ಹಿರಣ್ಯಗರ್ಭನ ಪದವಿಯನ್ನು ಹೊಂದಿಸು' ಎಂದರ್ಥ.

10 ಮೊದಲು ಪ್ರಾಣೋಪಾಸನೆ, ಅಭ್ಯಾರೋಹ-ಇವುಗಳಿಂದ ಹಿರಣ್ಯಗರ್ಭ ಪದ-ವಿಯ ಪ್ರಾಪ್ತಿಯಾಗುವುದೆಂದು ಹೇಳಿದ್ದಾಯಿತು; ಆ ವಿಷಯದಲ್ಲಿ ಶಂಕೆಯಿಲ್ಲ. ಆದರೆ ಕರ್ಮವಿಲ್ಲದೆ ಉಪಾಸನೆ ಮಾತ್ರ ಆ ಫಲವನ್ನು ಒದಗಿಸುತ್ತದೆಯೇ ಎಂಬ ಸಂದೇಹವುಂಟಾಗಬಹುದು. ಆ ಸಂದೇಹನಿವೃತ್ತಿಗಾಗಿ ಪ್ರಾಣೋಪಾಸನೆಯು ಕರ್ಮ ವಿಯುಕ್ತವಾದರೂ ಹಿರಣ್ಯಗರ್ಭಲೋಕವನ್ನು ಸಾಧಿಸುತ್ತದೆ ಎಂದು ಶ್ರುತಿಯು ಹೇಳುತ್ತದೆ.

11 'ನಾನು ವಿಶುದ್ಧವಾಗಿರುವ ಪ್ರಾಣನಾಗಿರುವೆನು; ಅಸುರರಿಗೆ ಸ್ವಾಭಾವಿಕ ವಾದ ಇಂದ್ರಿಯ-ವಿಷಯಗಳ ಸಂಗವೆಂಬ ಪಾಪವು ನನ್ನನ್ನು ಮುಟ್ಟಿರುವುದಿಲ್ಲ. ವಾಗಾದಿ ಪಂಚಕವು ನನ್ನ ಆಶ್ರಯದಿಂದ-ಸ್ವಾಭಾವಿಕ ಜ್ಞಾನದಿಂದ ಉಂಟಾಗುವ ಇಂದ್ರಿಯ-ವಿಷಯ-ಸಂಗದಿಂದ ಉತ್ಪನ್ನವಾಗುವ ಅಸುರಪಾಪವೆಂಬ ದೋಷದಿಂದ

ಮುಕ್ತವಾಗಿ ಅಗ್ನಿಯೇ ಮೊದಲಾದ ಸ್ವರೂಪವನ್ನು ಪಡೆದಿದೆ ಮತ್ತು ಸರ್ವಪ್ರಾಣಿಗಳಲ್ಲಿಯೂ ನನ್ನನ್ನು ಆಶ್ರಯಿಸಿ ತಿನ್ನತಕ್ಕ ಅನ್ನದ ಸಂಬಂಧವನ್ನು ಪಡೆದಿದೆ. ಆಂಗಿರಸನಾದುದರಿಂದ ಸರ್ವಪ್ರಾಣಿಗಳ ಆತ್ಮನಾಗಿರುವೆನು ಋಗ್ಯಜುಸ್ಸಾಮೋದ್ಗೀಥಗಳಾಗಿರುವ ವಾಕ್ಕಿನ ಆತ್ಮನು ನಾನು, ಏಕೆಂದರೆ ಅದನ್ನು ವ್ಯಾಪಿಸಿರುತ್ತೇನೆ ಮತ್ತು ಉಂಟುಮಾಡುತ್ತೇನೆ ಗೀತಭಾವವನ್ನು ಪಡೆದಿರುವ ಸಾಮನು ನಾನು, ಸುಸ್ವರವೆಂಬ ಬಾಹ್ಯಧನವು ನನಗಿದೆ, ಅದಕ್ಕಿಂತಲೂ ಆಂತರಿಕವೂ ಸುಸ್ವರವೂ ಆದ ಲಾಕ್ಷಣಿಕ ಸೌವರ್ಣ್ಯವು (ಒಳ್ಳೆಯ ವರ್ಣೋಚ್ಚಾರಣೆ) ನನಗಿದೆ; ನಾನು ಗೀತಿಭಾವವನ್ನು ಹೊಂದಿದಾಗ ಕಂಠಾದಿ ಸ್ಥಾನಗಳು ನನಗೆ ಆಶ್ರಯವಾಗಿವೆ. ಈ ಗುಣಗಳಿಂದ ಕೂಡಿರುವ ನಾನು ಅಮೂರ್ತನೂ ಸರ್ವಗತನೂ ಆಗಿರುವುದರಿಂದ ಗೆದ್ದಲೇ ಮೊದಲಾದುವುಗಳ ಶರೀರದಲ್ಲಿ ಪರಿಸಮಾಪ್ತನಾಗಿರುವೆನು' ಎಂದು ಅರಿತಿರುವವನು.

[12] ಪ್ರಾಣಾತ್ಮನು ತಾನೇ ಎಂದು ಅರಿತಿರುವವನು ಅದನ್ನು ಹೊಂದಲು ಆಶೆಪಡುವುದಿಲ್ಲ; ಗ್ರಾಮದಲ್ಲಿ ಇರುವವನು–ಕಾಡಿನಲ್ಲಿ ಇರುವವನಂತೆ–ಗ್ರಾಮವನ್ನು ಯಾವಾಗ ಸೇರಿಯೇನೆಂದು ಕಳವಳಪಡುವುದಿಲ್ಲ. ದೂರದಲ್ಲಿರುವ ಅನಾತ್ಮವಸ್ತುವಿನಲ್ಲಿ ನಿರೀಕ್ಷಣೆ ಸಾಧ್ಯವೇ ಹೊರತು ತನ್ನ ಆತ್ಮನಲ್ಲಿ ಸಾಧ್ಯವಾಗುವುದಿಲ್ಲ ಹಾಗೆಯೇ ಇಲ್ಲಿ ಪ್ರಾಣಾತ್ಮಭಾವವನ್ನು ಪಡೆಯದೆ ಇರಬಹುದೆಂಬ ಕಳವಳಕ್ಕೆ ಕಾರಣವಿಲ್ಲ.]

# ನಾಲ್ಕನೆಯ ಬ್ರಾಹ್ಮಣ

**ಆತ್ಮೈವೇದಮಗ್ರ ಆಸೀತ್ ಪುರುಷವಿಧಃ, ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್, ಸೋಽಹಮಸ್ಮೀತ್ಯಗ್ರೇ ವ್ಯಾಹರತ್, ತತೋಽಹಂನಾಮಾಭವತ್; ತಸ್ಮಾದಪ್ಯೇತರ್ಹ್ಯಾಮಂತ್ರಿತೋಽಹ-ಮಯಮಿತ್ಯೇವಾಗ್ರ ಉಕ್ತ್ವಾಥಾನ್ಯನ್ನಾಮ ಪ್ರಬ್ರೂತೇ ಯದಸ್ಯ ಭವತಿ; ಸ ಯತ್ಪೂರ್ವೋಽಸ್ಮಾತ್ ಸರ್ವಸ್ಮಾತ್ ಸರ್ವಾನ್ ಪಾಪ್ಮನ ಔಷತ್ ತಸ್ಮಾತ್ ಪುರುಷಃ; ಓಷತಿ ಹ ವೈ ಸ ತಂ ಯೋಽಸ್ಮಾತ್ ಪೂರ್ವೋ ಬುಭೂಷತಿ ಯ ಏವಂ ವೇದ ॥ ೧ ॥**

ಅಗ್ರೇ=ಮೊದಲು ಇದಂ=ಇದು, ಜಗತ್ತು ಪುರುಷವಿಧಃ=ಪುರುಷಾಕಾರನಾದ ಆತ್ಮಾ ಏವ=ಆತ್ಮನೇ ಆಸೀತ್=ಆಗಿತ್ತು ; ಸಃ=ಅವನು ಅನುವೀಕ್ಷ್ಯ=ಆಲೋಚನೆ ಮಾಡಿ ಆತ್ಮನಃ ಅನ್ಯತ್=ತನಗಿಂತ ಬೇರೆಯಾದುದನ್ನು ನ ಅಪಶ್ಯತ್=ನೋಡಲಿಲ್ಲ ; ಅಹಂ=ನಾನು ಸಃ ಅಸ್ಮಿ=ಅವನಾಗಿದ್ದೇನೆ ಇತಿ=ಎಂದು ಅಗ್ರೇ=ಮೊದಲು ವ್ಯಾಹ-ರತ್=ಹೇಳಿದನು, ತತಃ-ಆದುದರಿಂದ ಅಹಂ=ನಾಮಾ ಅಭವತ್=ನಾನು ಎಂಬ ಹೆಸರನ್ನು ಪಡೆದನು, ತಸ್ಮಾತ್=ಆದುದರಿಂದ ಏತರ್ಹಿ=ಅಪಿ=ಈಗಲೂ ಕೂಡ ಆಮಂತ್ರಿತಃ=ಕರೆದು ಮಾತನಾಡಿಸಿದಾಗ ಅಯಂ ಅಹಂ=ನಾನು ಅವನು ಇತಿ ಏವ= ಎಂದೇ ಅಗ್ರೇ=ಮೊದಲು ಉಕ್ತ್ವಾ=ಹೇಳಿ ಅಥ=ಅನಂತರ ಅಸ್ಯ=ಅವನ ಯತ್ ಅನ್ಯತ್ ನಾಮ ಭವತಿ=ಯಾವ ಬೇರೆ ಹೆಸರಿದೆಯೊ [ತತ್=ಅದನ್ನು] ಪ್ರಬ್ರೂತೇ= ಹೇಳುತ್ತಾನೆ, ಯತ್=ಯಾವ ಕಾರಣದಿಂದ ಸಃ=ಅವನು ಪೂರ್ವಃ [ಸನ್]=ಮೊದಲನೆಯವನೊ ಅಸ್ಮಾತ್ ಸರ್ವಸ್ಮಾತ್ [ಆದೌ]=ಈ ಎಲ್ಲರಿಗಿಂತಲೂ [ಮೊದಲು] ಸರ್ವಾನ್ ಪಾಪ್ಮನಃ=ಎಲ್ಲ ಪಾಪಗಳನ್ನು ಔಷತ್=ದಹಿಸಿದನೊ ತಸ್ಮಾತ್=ಆ ಕಾರಣದಿಂದ ಪುರುಷಃ=ಪುರುಷನು ; ಯಃ ಏವಂ ವೇದ=ಯಾವನು ಹೀಗೆ ಅರಿಯುವನೊ ಸಃ=ಅವನು ತಂ=ಅವನನ್ನು ಓಷತಿ ಹ ವೈ=ದಹಿಸುತ್ತಾನೆ, ಯಃ=ಯಾವನು ಅಸ್ಮಾತ್ ಪೂರ್ವಃ=ಇವನಿಗಿಂತ ಮೊದಲು ಬುಭೂಷತಿ=[ಪ್ರಜಾಪತಿಯಾಗಲು] ಇಚ್ಛಿಸುವನೊ.

**೧. ಮೊದಲು[1] ಈ (ಜಗತ್ತು)[2] ಪುರುಷಾಕಾರನಾದ ಆತ್ಮನೇ[3] ಆಗಿತ್ತು.[4] ಅವನು ಆಲೋಚನೆಮಾಡಿ[5] ತನಗಿಂತ[6] ಬೇರೆಯಾದುದನ್ನು ನೋಡಲಿಲ್ಲ. 'ನಾನು ಅವನಾಗಿದ್ದೇನೆ'[7] ಎಂದು ಮೊದಲು ಹೇಳಿದನು. ಆದುದರಿಂದ 'ನಾನು' ಎಂಬ ಹೆಸರನ್ನು ಪಡೆದನು. ಆದುದರಿಂದ ಈಗಲೂ ಕೂಡ ಕರೆದು**

ಮಾತನಾಡಿಸಿದಾಗ 'ನಾನು' ಎಂದೇ ಮೊದಲು ಹೇಳಿ ಅನಂತರ ತನ್ನ ಬೇರೆ ಹೆಸರನ್ನು[8] ಹೇಳುತ್ತಾನೆ. ಅವನು ಮೊದಲನೆಯವನಾದುದರಿಂದಲೂ ಮತ್ತು ಎಲ್ಲರಿಗಿಂತ ಮೊದಲು ಪಾಪಗಳನ್ನು[9] ದಹಿಸಿದ್ದರಿಂದಲೂ ಪುರುಷನು. ಯಾವನು ಹೀಗೆ ಅರಿಯುತ್ತಾನೆಯೊ ಅವನು ತನಗಿಂತ ಮೊದಲು (ಪ್ರಜಾಪತಿಯಾಗಲು) ಇಚ್ಛಿಸುವವನನ್ನು ದಹಿಸುತ್ತಾನೆ.[10]

[ಜಗತ್ತಿನ ಸೃಷ್ಟಿ–ಸ್ಥಿತಿ–ಸಂಹಾರಗಳಲ್ಲಿ ಪ್ರಜಾಪತಿಯ ಸ್ವಾತಂತ್ರ್ಯವೇ ಮೊದಲಾದ ವಿಭೂತಿಗಳ ವರ್ಣನೆಯ ಮೂಲಕ ವೇದೋಕ್ತವಾದ ಜ್ಞಾನಕರ್ಮಗಳ ಫಲೋತ್ಕರ್ಷವನ್ನು ತಿಳಿಸಲು ಈ ಬ್ರಾಹ್ಮಣವನ್ನು ಆರಂಭಿಸಿದೆ. ಈ ವರ್ಣನೆಯಿಂದ ಕರ್ಮಕಾಂಡದಲ್ಲಿ ವಿಹಿತವಾದ ಜ್ಞಾನಕರ್ಮಗಳನ್ನು ಸ್ತುತಿಸಿದಂತೆಯೂ ಆಗುವುದು ಆದರೆ ಇಲ್ಲಿ ಸೂಚಿತವಾದ ಅರ್ಥ ಹೀಗಿದೆ, ಈ ಜ್ಞಾನಕರ್ಮಗಳ ಫಲವೆಲ್ಲ ಸಂಸಾರವೇ; ಏಕೆಂದರೆ ಪ್ರಜಾಪತಿಯು ಭಯ, ಅರತಿ ಮೊದಲಾದುವುಗಳಿಂದ ಕೂಡಿರುವನೆಂದೂ, ಅವನು ಶರೀರೇಂದ್ರಿಯರೂಪಿಯೆಂದೂ, ಸ್ಥೂಲವೂ ವ್ಯಕ್ತವೂ ಅನಿತ್ಯವೂ ಆದ ವಿಷಯಗಳಿಂದ ಒಳಗೊಂಡಿರುವನೆಂದೂ ಶ್ರುತಿಯಲ್ಲಿ ಹೇಳಿದೆ. ಮುಂದೆ ಹೇಳುವ ಕೇವಲ ಬ್ರಹ್ಮವಿದ್ಯೆಯು ಮೋಕ್ಷಹೇತುವು ಎಂಬುದನ್ನು ತಿಳಿಸಲು ಇದು ಅವತರಣಿಕೆಯಾಗಿದೆ. ಏಕೆಂದರೆ ಬಾಯಾರಿಕೆಯಿಲ್ಲದವನಿಗೆ ಜಲಪಾನದಲ್ಲಿ ಪ್ರಯೋಜನವಿಲ್ಲದಂತೆ ಸಾಧ್ಯಸಾಧನಾದಿ–ಭೇದರೂಪವುಳ್ಳ ಸಂಸಾರವಿಷಯದಿಂದ ವಿರಕ್ತನಾದವನಿಗೆ ಆತ್ಮೈಕತ್ವ ಜ್ಞಾನವಿಷಯದಲ್ಲಿ ಅಧಿಕಾರವಿರುವುದಿಲ್ಲ. ಆದುದರಿಂದ ಜ್ಞಾನಕರ್ಮಗಳ ಫಲೋತ್ಕರ್ಷೆಯ ವಿವರಣೆಯು ಮುಂದಿನ ಭಾಗವನ್ನು ಪ್ರಾರಂಭಿಸಲು ಬಂದಿದೆ. 'ಇವುಗಳೆಲ್ಲಲ್ಲ ಆ ಈ ಆತ್ಮನನ್ನೇ ಪಡೆಯಬೇಕು' ತದೇತತ್ ಪದನೀಯಮಸ್ಯ (೧, ೪, ೭), 'ಆತ್ಮನು ಪುತ್ರನಿಗಿಂತಲೂ ಪ್ರಿಯತರನು' ತದೇತತ್ ಪ್ರೇಯಃ ಪುತ್ರಾತ್ (೧, ೪, ೮) ಎಂದು ಶ್ರುತಿಯೇ ಮುಂದೆ ಹೇಳುವುದು.

1 ಬೇರೆ ಶರೀರಗಳು ಉತ್ಪನ್ನವಾಗುವುದಕ್ಕೆ ಮೊದಲು.

2 ಶರೀರಭೇದಸಮೂಹ

3 ಅಂಡದಿಂದ ಹುಟ್ಟಿದ ಶರೀರಿಯೂ, ವೈದಿಕಜ್ಞಾನಕರ್ಮಗಳ ಫಲವೂ ಆದ ಪ್ರಜಾಪತಿ. ಭಾಷ್ಯಕಾರರು ಪ್ರಜಾಪತಿಯನ್ನೇ ಹಿರಣ್ಯಗರ್ಭ, ವಿರಾಟ್ಪುರುಷ ಎಂಬ ಹೆಸರುಗಳಿಂದ ಸೂಚಿಸಿದ್ದಾರೆ.

4 ಪ್ರಜಾಪತಿಯ ಶರೀರದಿಂದ ಭಿನ್ನವಾಗಿರಲಿಲ್ಲ.

5 'ನಾನು ಯಾರು ? ನನ್ನ ಲಕ್ಷಣವೇನು ?' ಎಂದು.

6 ಶರೀರೇಂದ್ರಿಯರೂಪಿಯಾದ ತನಗಿಂತ

7 'ಸರ್ವಾತ್ಮನಾದ ಪ್ರಜಾಪತಿಯೇ ನಾನು'

8 ತಾಯಿತಂದೆಗಳು ಕೊಟ್ಟ ಹೆಸರನ್ನು.

9 ಪ್ರಜಾಪತಿತ್ವಕ್ಕೆ ಪ್ರತಿಬಂಧಕಾರಣವಾಗಿದ್ದ ಆಸಂಗ ಮತ್ತು ಅಜ್ಞಾನ.

10 ಉತ್ಕೃಷ್ಟಸಾಧನವುಳ್ಳವನು ಪ್ರಜಾಪತಿತ್ವವನ್ನು ಮೊದಲು ಪಡೆಯುತ್ತಾನೆ. ನ್ಯೂನಸಾಧನೆಯುಳ್ಳವನು ಪಡೆಯುವುದಿಲ್ಲ ಎಂಬರ್ಥ]

**ಸೋಽಬಿಭೇತ್, ತಸ್ಮಾದೇಕಾಕೀ ಬಿಭೇತಿ; ಸ ಹಾಯಮೀಕ್ಷಾಂ ಚಕ್ರೇ, ಯನ್ಮದನ್ಯನ್ನಾಸ್ತಿ, ಕಸ್ಮಾನ್ನು ಬಿಭೇಮೀತಿ, ತತ ಏವಾಸ್ಯ ಭಯಂ ವೀಯಾಯ, ಕಸ್ಮಾದ್ಧ್ಯಭೇಷ್ಯತ್? ದ್ವಿತೀಯಾದ್ವೈ ಭಯಂ ಭವತಿ ॥ ೨ ॥**

ಸಃ=ಅವನು ಅಬಿಭೇತ್=ಭಯಪಟ್ಟನು, ತಸ್ಮಾತ್=ಆದುದರಿಂದ ಏಕಾಕೀ= ಏಕಾಕಿಯಾದವನು ಬಿಭೇತಿ=ಭಯಪಡುತ್ತಾನೆ; ಸಃ ಹ ಅಯಂ=ಆ ಇವನು ಈಕ್ಷಾಂ ಚಕ್ರೇ=ಆಲೋಚಿಸಿದನು—ಯತ್=ಯಾವ ಕಾರಣದಿಂದ ಮದನ್ಯತ್= ನನಗಿಂತ ಬೇರೆಯಾದುದು ನ ಅಸ್ತಿ=ಇಲ್ಲವೊ [ಆ ಕಾರಣದಿಂದ] ಕಸ್ಮಾತ್ ನು= ಯಾವುದಕ್ಕೆ ಬಿಭೇಮಿ=ಹೆದರಬೇಕು ಇತಿ=ಎಂದು; ತತಃ ಎವ=ಅದರಿಂದಲೇ ಅಸ್ಯ= ಅವನ ಭಯಂ=ಭಯವು ವೀಯಾಯ=ಹೊರಟುಹೋಯಿತು, ಹಿ=ಏಕೆಂದರೆ ಕಸ್ಮಾತ್=ಯಾವುದಕ್ಕೆ ಅಭೇಷ್ಯತ್=ಹೆದರಬೇಕಾಗಿತ್ತು? ದ್ವಿತಿಯಾತ್ ವೈ=ಎರಡನೆಯದರಿಂದಲೇ ಭಯಂ ಭವತಿ=ಭಯವುಂಟಾಗುತ್ತದೆ

೨. ಅವನು[1] ಭಯಪಟ್ಟನು.[2] ಆದುದರಿಂದ ಏಕಾಕಿಯಾದವನು (ಈಗಲೂ) ಭಯಪಡುತ್ತಾನೆ. 'ನನಗಿಂತ ಬೇರೆಯಾದುದು[3] ಇಲ್ಲದಿರುವಾಗ ನಾನು ಯಾವುದಕ್ಕೆ ಹೆದರಬೇಕು?' ಎಂದು ಆ ಇವನು ಆಲೋಚಿಸಿದನು. ಆದುದರಿಂದಲೇ[4] ಅವನ ಭಯವು ಹೊರಟುಹೋಯಿತು; ಏಕೆಂದರೆ ಅವನು ಯಾವುದಕ್ಕೆ ಹೆದರಬೇಕಾಗಿತ್ತು?[5] ಎರಡನೆಯದರಿಂದಲೇ[6] ಭಯವುಂಟಾಗುತ್ತದೆ.

[1 ಪುರುಷವಿಧನೂ ಪ್ರಥಮಶರೀರಿಯೂ ಆದ ಪ್ರಜಾಪತಿ.

2 ತಾನು ನಾಶವಾಗುವನೆಂಬ ತಪ್ಪು ತಿಳುವಳಿಕೆಯಿಂದ.

3 ಪ್ರತಿದ್ವಂದ್ವಿಯಾದ ಬೇರೊಂದು ವಸ್ತು.

4 ಯಥಾರ್ಥವಾದ ಆತ್ಮದರ್ಶನದಿಂದಲೇ.

5 ಕೇವಲ ಅವಿದ್ಯಾನಿಮಿತ್ತದಿಂದ ಪ್ರಜಾಪತಿಗೆ ಭಯವಾಗಿತ್ತು, ಪರಮಾರ್ಥ ದರ್ಶನವಾದಾಗ ಅದು ಇರಲಾರದು.

6 ಈ ಎರಡನೆಯ ವಸ್ತು ಅವಿದ್ಯೆಯಿಂದ ಬಂದಿದೆ. ಅದೃಶ್ಯವಾದ ಎರಡನೆಯ ವಸ್ತು ಭಯವನ್ನು ಉಂಟುಮಾಡಲಾರದು. 'ಅಲ್ಲಿ ಏಕತ್ವವನ್ನು ನೋಡುತ್ತಿರುವವನಿಗೆ ಶೋಕವೆಲ್ಲಿ ?' ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ಎಂದು ಶ್ರುತಿಯು (ಈ. ಉ. ೭) ಹೇಳುತ್ತದೆ.]

**ಸ ವೈ ನೈವ ರೇಮೇ, ತಸ್ಮಾದೇಕಾಕೀ ನ ರಮತೇ; ಸ ದ್ವಿತೀಯಮೈಚ್ಛತ್। ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ; ಸ ಇಮಮೇವಾತ್ಮಾನಂ ದ್ವೇಧಾಪಾತಯತ್, ತತಃ ಪತಿಶ್ಚ ಪತ್ನೀ ಚಾಭವತಾಂ; ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞವಲ್ಕ್ಯಃ, ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ; ತಾಂ ಸಮಭವತ್, ತತೋ ಮನುಷ್ಯಾ ಅಜಾಯಂತ ॥ ೩ ॥**

ಸಃ ವೈ=ಅವನು ನ ಏವ ರೇಮೇ=ರಮಿಸಲೇ ಇಲ್ಲ; ತಸ್ಮಾತ್=ಆದುದರಿಂದ ಏಕಾಕೀ=ಏಕಾಕಿಯಾದವನು ನ ರಮತೇ=ರತಿಯನ್ನು ಪಡೆಯುವುದಿಲ್ಲ; ಸಃ= ಅವನು ದ್ವಿತೀಯಂ=ಎರಡನೆಯದನ್ನು ಐಚ್ಛತ್=ಬಯಸಿದನು. ಸಃಹ=ಅವನು ಏತಾವಾನ್ ಆಸ=ಅಷ್ಟಾದನು ಯಥಾ ಸಂಪರಿಷ್ವಕ್ತೌ ಸ್ತ್ರೀಪುಮಾಂಸೌ=ಆಲಿಂಗಿತರಾದ ಸ್ತ್ರೀಪುರುಷರು ಎಷ್ಟೋ; ಸಃ=ಅವನು ಇಮಂ ಏವ ಆತ್ಮಾನಂ=ಈ ಶರೀರವನ್ನೇ ದ್ವೇಧಾ ಅಪಾತಯತ್=ಎರಡಾಗಿ ಮಾಡಿ ಬೀಳಿಸಿದನು; ತತಃ=ಆ ವಿಭಜನೆಯಿಂದ ಪತಿಃ ಚ ಪತ್ನೀ ಚ=ಪತಿಪತ್ನಿಯರು ಅಭವತಾಂ=ಆದರು; ತಸ್ಮಾತ್=ಆದುದರಿಂದ ಇದಂ=ಈ ಶರೀರವು ಸ್ವಃ=ತನ್ನ ಅರ್ಧಬೃಗಲಂ ಇವ=ಹೋಳಾದ ಬೀಜದಂತೆ ಇತಿ ಹ ಯಾಜ್ಞವಲ್ಕ್ಯಃ ಆಹ ಸ್ಮ=ಎಂದು ಯಾಜ್ಞವಲ್ಕ್ಯನು ಹೇಳಿದನು; ತಸ್ಮಾತ್= ಆದುದರಿಂದ ಅಯಂ ಆಕಾಶಃ=ಈ ಆಕಾಶವು ಸ್ತ್ರಿಯಾ=ಸ್ತ್ರೀಯಿಂದ ಪೂರ್ಯತೇ ಏವ=ಪೂರ್ಣವಾಗುತ್ತದೆ; ತಾಂ=ಅವಳೊಂದಿಗೆ ಸಮಭವತ್=ಬೆರೆತನು. ತತಃ= ಆದರಿಂದ ಮನುಷ್ಯಾಃ=ಮನುಷ್ಯರು ಅಜಾಯಂತ=ಹುಟ್ಟಿದರು.

೩. ಅವನು ರಮಿಸಲೇ ಇಲ್ಲ.[1] ಆದುದರಿಂದ ಏಕಾಕಿಯಾದವನು ರತಿಯನ್ನು[2] ಪಡೆಯುವುದಿಲ್ಲ. ಅವನು ಎರಡನೆಯದನ್ನು[3] ಬಯಸಿದನು. ಅವನು ಆಲಿಂಗಿತರಾದ ಸ್ತ್ರೀಪುರುಷರಷ್ಟೇ ಪ್ರಮಾಣವುಳ್ಳವನಾದನು.[4] ಅವನು ಈ ಶರೀರವನ್ನೇ ಎರಡಾಗಿ ಮಾಡಿ ಬೀಳಿಸಿದನು.[5] ಆ ವಿಭಜನೆ

ಯಿಂದ ಪತಿಪತ್ನಿಯರಾದರು.[6] 'ಆದುದರಿಂದ ಈ ಶರೀರವು ಅರ್ಧವಾಗಿರುವ ಬೀಜದಂತೆ ತನ್ನ ಅರ್ಧವಾಗಿದೆ' ಎಂದು ಯಾಜ್ಞವಲ್ಕ್ಯನು[7] ಹೇಳಿರುವನು. ಆದುದರಿಂದ ಈ ಆಕಾಶವು[8] ಸ್ತ್ರೀಯಿಂದ ಪೂರ್ಣವಾಗುತ್ತದೆ. (ಅವನು)[9] ಅವಳೊಂದಿಗೆ ಬೆರೆತನು. ಅದರಿಂದ ಮನುಷ್ಯರು ಹುಟ್ಟಿದರು

[1 ಪ್ರಜಾಪತಿತ್ವವು ಸಂಸಾರದ ವಿಷಯವೆಂಬುದಕ್ಕೆ ಮತ್ತೊಂದು ಕಾರಣ.

2 ಇಷ್ಟಾರ್ಥಸಂಬಂಧದಿಂದ ಉಂಟಾಗುವ ಕ್ರೀಡೆಗೆ ರತಿಯೆಂದು ಹೆಸರು. ಇಷ್ಟ-ವಿಯೋಗದಿಂದ ಮನಸ್ಸಿನಲ್ಲಿ ಆಗುವ ಕಳವಳಕ್ಕೆ ಅರತಿಯೆಂದು ಹೆಸರು.

3 ಸ್ತ್ರೀ ವಸ್ತುವನ್ನು.

4 ಸ್ತ್ರೀಯನ್ನು ಬಯಸಿದ ಅವನಿಗೆ ತಾನು ಸ್ತ್ರೀಯಿಂದ ಆಲಿಂಗಿತನಾದಂತೆ ಭಾವವುಂಟಾಯಿತು. ಅವನು ಸತ್ಯಸಂಕಲ್ಪನಾದುದರಿಂದ ಆ ಭಾವದ ಮೂಲಕ ಅಷ್ಟೇ ಪ್ರಮಾಣವುಳ್ಳವನಾದನು.

5 ವಿರಾಟ್ಪುರುಷನ ಪೂರ್ವರೂಪವು ನಾಶವಾಗಲಿಲ್ಲ, ಅವನು ಮೊದಲಿನಂತೆಯೇ ಇದ್ದನು. ಅವನು ಸತ್ಯಸಂಕಲ್ಪನಾದುದರಿಂದ ತನಗಿಂತ ವ್ಯತಿರಿಕ್ತವಾದ, ಆಲಿಂಗಿತರಾದ ಸ್ತ್ರೀಪುರುಷರಷ್ಟು ಪ್ರಮಾಣವುಳ್ಳ ಮತ್ತೊಂದು ಶರೀರವನ್ನು ಸೃಷ್ಟಿಸಿದನು.

6 ಇದು ದಂಪತಿ-ಪದದ ನಿರ್ವಚನ.

7 ಯಜ್ಞದ ವಲ್ಕನು (ಎಂದರೆ ವಕ್ತೃವು) ಯಜ್ಞವಲ್ಕನು; ಅವನ ಮಗನು ಯಾಜ್ಞವಲ್ಕ್ಯನು, ದೇವರಾತನ ಮಗನು ಎಂದರ್ಥ; ಅಥವಾ ಬ್ರಹ್ಮನ ಮಗನು.

8 ಸ್ತ್ರೀಯೆಂಬ ಅರ್ಧವಿಲ್ಲದಿರುವಾಗ ಪುರುಷಾರ್ಥವು ಅಪೂರ್ಣವಾಗುತ್ತದೆ; ವಿವಾಹವಾದಮೇಲೆ ಸ್ತ್ರೀ-ಅರ್ಧದಿಂದ ಪುರುಷಾರ್ಥವು ಪೂರ್ಣವಾಗುತ್ತದೆ.

9 ಮನುವೆಂಬ ಪ್ರಜಾಪತಿಯು ಶತರೂಪೆಯೆಂಬ ತನ್ನ ಮಗಳನ್ನು ಪತ್ನೀರೂಪದಿಂದ ಕಲ್ಪಿಸಿಕೊಂಡು ಅವಳೊಂದಿಗೆ ಸೇರಿದನು. ಇಲ್ಲಿಂದ ಪ್ರಾರಂಭವಾದುದು ಮೈಥುನಸೃಷ್ಟಿ.]

**ಸೋ ಹೇಯಮೀಕ್ಷಾಂಚಕ್ರೇ, ಕಥಂ ನು ಮಾತ್ಮನ ಏವ ಜನಯಿತ್ವಾ ಸಂಭವತಿ? ಹಂತ ತಿರೋಽಸಾನೀತಿ; ಸಾ ಗೌರಭವತ್, ಋಷಭ ಇತರಃ, ತಾಂ ಸಮೇವಾಭವತ್, ತತೋ ಗಾವೋಽಜಾಯಂತ; ವಡವೇತರಾಭವತ್, ಅಶ್ವವೃಷ ಇತರಃ, ಗರ್ದಭೀತರಾ, ಗರ್ದಭ ಇತರಃ, ತಾಂ ಸಮೇವಾಭವತ್, ತತ ಏಕಶಫಮಜಾಯತ; ಅಜೇತರಾಭವತ್, ವಸ್ತ ಇತರಃ, ಅವಿರಿತರಾ, ಮೇಷ**

**ಇತರಃ, ತಾಂ ಸಮೇವಾಭವತ್, ತತೋಽಜಾವಯೋಽಜಾಯಂತ; ಏವಮೇವ ಯದಿದಂ ಕಿಂಚ ಮಿಥುನಮ್, ಆಪಿಪೀಲಿಕಾಭ್ಯಃ, ತತ್ ಸರ್ವಮಸೃಜತ ॥ ೪ ॥**

ಸಾ ಉ ಹ ಇಯಂ=ಆ ಈ [ಶತರೂಪೆಯು] ಈಕ್ಷಾಂಚಕ್ರೇ=ಆಲೋಚಿಸಿದಳು_ ಮಾ=ನನ್ನನ್ನು ಆತ್ಮನಃ ಏವ=ತನ್ನಿಂದಲೇ ಜನಯಿತ್ವಾ=ಹುಟ್ಟಿಸಿ ಕಥಂ ನು=ಹೇಗೆ ಸಂಭವತಿ=ಸೇರುವನು ? ಹಂತ=ಸರಿ ತಿರೋಽಸಾನಿ=ಮರೆಯಾಗುವೆನು ಇತಿ=ಎಂದು ಸಾ=ಅವಳು ಗೌಃ ಅಭವತ್=ಹಸುವಾದಳು, ಇತರಃ ಋಷಭಃ=ಅವನು ಹೋರಿ ಯಾದನು, ತಾಂ=ಅವಳನ್ನು ಸಮಭವತ್ ಏವ=ಸೇರಿದನು, ತತಃ=ಅದರಿಂದ ಗಾವಃ=ಗೋವುಗಳು ಅಜಾಯಂತ=ಹುಟ್ಟಿದುವು. ಇತರಾ ವಡವಾ ಅಭವತ್= ಅವಳು ಹೆಣ್ಣು ಕುದುರೆಯಾದಳು, ಇತರಃ ಅಶ್ವವೃಷಃ=ಅವನು ಗಂಡು ಕುದುರೆ ಯಾದನು, ಇತರಾ ಗರ್ದಭೀ=ಅವಳು ಹೆಣ್ಣು ಕತ್ತೆಯಾದಳು_ ಇತರ ಗರ್ದಭಃ= ಅವನು ಗಂಡು ಕತ್ತೆಯಾದನು, ತಾಂ ಸಮಭವತ್ ಏವ=ಅವಳನ್ನು ಸೇರಿದನು, ತತಃ=ಅದರಿಂದ ಏಕಶಫಂ ಅಜಾಯತ=ಒಂದು ಗೊರಸಿನ ಪ್ರಾಣಿತ್ರಯವು ಹುಟ್ಟಿತು. ಇತರಾ ಅಜಾ ಅಭವತ್=ಅವಳು ಹೆಣ್ಣು ಆಡಾದಳು ಇತರಃ ವಸ್ತಃ=ಅವನು ಹೋತವಾದನು, ಇತರಾ ಅವಿಃ=ಅವಳು ಹೆಣ್ಣು ಕುರಿಯಾದಳು, ಇತರಃ ಮೇಷಃ= ಅವನು ಟಗರಾದನು, ತಾಂ ಸಮಭವತ್ ಏವ ತತಃ ಅಜಾವಯಃ ಅಜಾಯಂತ= ಅವಳನ್ನು ಸೇರಿದನು, ಅದರಿಂದ ಆಡುಕುರಿಗಳು ಹುಟ್ಟಿದುವು, ಏವಂ ಏವ= ಹೀಗೆಯೇ ಆಪಿಪೀಲಿಕಾಭ್ಯಃ=ಇರುವೆಗಳ ವರೆಗೆ ಯತ್ ಕಿಂ ಚ ಇದತ ಮಿಥುನಂ= ಈ ಯಾವ ಯಾವ ಮಿಥುನವಿದೆಯೊ ತತ್ ಸರ್ವಂ=ಅದೆಲ್ಲವನ್ನೂ ಅಸೃಜತ=ಸೃಷ್ಟಿ ಸಿದನು.

೪. 'ನನ್ನನ್ನು ತನ್ನಿಂದಲೇ ಹುಟ್ಟಿಸಿ (ನನ್ನೊಂದಿಗೆ) ಹೇಗೆ ಸೇರು ವನು ?[1] ಸರಿ, ಮರೆಯಾಗುವೆನು' ಎಂದು ಆ ಈ ಶತರೂಪೆಯು ಆಲೋಚಿಸಿ ದಳು. ಅವಳು ಹಸುವಾದಳು.[2] ಅವನು ಹೋರಿಯಾದನು ಮತ್ತು ಅವಳನ್ನು ಸೇರಿದನು ; ಅದರಿಂದ ಗೋವುಗಳು ಹುಟ್ಟಿದವು. ಅವಳು ಹೆಣ್ಣು ಕುದುರೆಯಾದಳು, ಅವನು ಗಂಡು ಕುದುರೆಯಾದನು ; ಅವಳು ಹೆಣ್ಣು ಕತ್ತೆಯಾದಳು, ಅವನು ಗಂಡು ಕತ್ತೆಯಾದನು ಮತ್ತು ಅವಳನ್ನು ಸೇರಿದನು. ಅದರಿಂದ ಒಂದು ಗೊರಸಿನ ಪ್ರಾಣಿತ್ರಯವು[3] ಹುಟ್ಟಿತು. ಅವಳು ಹೆಣ್ಣು ಆಡಾದಳು, ಅವನು ಹೋತವಾದನು ; ಅವಳು ಹೆಣ್ಣು ಕುರಿ ಯಾದಳು, ಅವನು ಗಂಡು ಕುರಿಯಾದನು ಮತ್ತು ಅವಳನ್ನು ಸೇರಿದನು,

ಆದರಿಂದ ಆಡುಗಳೂ ಕುರಿಗಳೂ ಹುಟ್ಟಿದುವು. ಹೀಗೆಯೇ ಇರುವೆಗಳವರೆಗೆ ಈ ಯಾವ ಯಾವ ಮಿಥುನವಿದೆಯೊ ಅದೆಲ್ಲವನ್ನೂ ಸೃಷ್ಟಿಸಿದನು.

[[1] ಸ್ಮೃತಿಗಳಲ್ಲಿ ನಿಷೇಧಿಸಿರುವುದನ್ನು ಸ್ಮರಿಸಿಕೊಂಡು.

[2] ಉತ್ಪತ್ತಿಯಾಗುವ ಪ್ರಾಣಿಗಳ ಕರ್ಮಗಳಿಂದ ಶತರೂಪೆಗೂ ಮನುವಿಗೂ ಪುನಃ ಪುನಃ ಭಿನ್ನ ಭಿನ್ನ ಪ್ರಾಣಿಗಳ ರೂಪವನ್ನು ತಾಳುವ ಬುದ್ಧಿಯೇ ಉಂಟಾಯಿತು.

[3] ಕುದುರೆ, ಹೇಸರಕತ್ತೆ, ಕತ್ತೆ.]

**ಸೋಽವೇತ್, ಅಹಂ ವಾವ ಸೃಷ್ಟಿರಸ್ಮಿ, ಅಹಂ ಹೀದಂ ಸರ್ವಮಸೃಕ್ಷೀತಿ ; ತತಃ ಸೃಷ್ಟಿರಭವತ್ ; ಸೃಷ್ಟ್ಯಾಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ॥ ೫ ॥**

ಸಃ=ಅವನು, ಪ್ರಜಾಪತಿಯು ಅವೇತ್=ಅರಿತುಕೊಂಡನು—ಅಹಂ ವಾವ=ನಾನೇ ಸೃಷ್ಟಿಃ ಅಸ್ಮಿ=ಸೃಷ್ಟಿಯಾಗಿರುತ್ತೇನೆ, ಹಿ=ಏಕೆಂದರೆ ಅಹಂ=ನಾನು ಇದಂ ಸರ್ವಂ=ಇದೆಲ್ಲವನ್ನೂ ಅಸೃಕ್ಷಿ=ಸೃಷ್ಟಿಸಿದೆನು ಇತಿ=ಎಂದು ; [ಯಾವ ಕಾರಣದಿಂದ ಅವನು ಸೃಷ್ಟಿಶಬ್ದದಿಂದ ತನ್ನನ್ನು ನಿರ್ದೇಶಿಸಿಕೊಂಡನೊ] ತತಃ=ಆ ಕಾರಣದಿಂದ ಸೃಷ್ಟಿಃ ಅಭವತ್=ಸೃಷ್ಟಿಯೆಂದೆನಿಸಿಕೊಂಡನು; ಯಃ=ಯಾವನು ಏವಂ ವೇದ=ಹೀಗೆ ಅರಿಯುತ್ತಾನೆಯೋ [ಅವನು] ಅಸ್ಯ=ಅವನ, ಪ್ರಜಾಪತಿಯ ಏತಸ್ಯಾಂ ಸೃಷ್ಟ್ಯಾಂ=ಈ ಸೃಷ್ಟಿಯಲ್ಲಿ [ಸ್ರಷ್ಟಾ] ಭವತಿ ಹ=ಸೃಷ್ಟಿಕರ್ತೃವಾಗುವನು.

೫. 'ನಾನೇ ಸೃಷ್ಟಿಯಾಗಿರುವೆನು ; ಏಕೆಂದರೆ ನಾನೇ ಇದೆಲ್ಲವನ್ನೂ ಸೃಷ್ಟಿಸಿರುವೆನು' ಎಂದು ಪ್ರಜಾಪತಿಯು ಅರಿತುಕೊಂಡನು[1]. (ಪ್ರಜಾಪತಿಯು ತನ್ನನ್ನು ಸೃಷ್ಟಿಶಬ್ದದಿಂದ ನಿರ್ದೇಶಿಸಿಕೊಂಡುದುದರಿಂದ) ಅವನು ಸೃಷ್ಟಿಯೆಂದೆನಿಸಿದನು. ಯಾವನು ಹೀಗೆ ಅರಿಯುವನೊ[2] (ಅವನು) ಪ್ರಜಾಪತಿಯ ಈ ಸೃಷ್ಟಿಯಲ್ಲಿ ಸೃಷ್ಟಿಕರ್ತೃವಾಗುವನು.

[[1] 'ನನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತು ನನ್ನಿಂದ ಅಭಿನ್ನವಾಗಿರುವುದರಿಂದ ನಾನೇ ಜಗತ್ತಾಗಿರುವೆನು. ಅದು ನನಗಿಂತ ವ್ಯತಿರಿಕ್ತವಾಗಿಲ್ಲ.'

[2] ಯಾವನು ಪ್ರಜಾಪತಿಯಂತೆ ಯಥೋಕ್ತವಾದ ಜಗತ್ತು ತನಗಿಂತ ಅಭಿನ್ನವೆಂದು ಅರಿತುಕೊಂಡಿರುವನೊ.]

**ಅಥೇತ್ಯಭ್ಯಮಂಥತ್, ಸ ಮುಖಾಚ್ಚ ಯೋನೇರ್ಹಸ್ತಾಭ್ಯಾಂ ಚಾಗ್ನಿಮಸೃಜತ ; ತಸ್ಮಾದೇತದುಭಯಮಲೋಮಕಮಂತರತಃ, ಅಲೋಮಕಾ ಹಿ ಯೋನಿರಂತರತಃ । ತದ್ಯದಿದ-**

**ಮಾಹುಃ, ಅಮುಂ ಯಜಾಮುಂ ಯಜೇತಿ, ಏಕೈಕಂ ದೇವಮ್, ಏತಸ್ಯೈವ ಸಾ ವಿಸೃಷ್ಟಿಃ, ಏಷ ಉ ಹ್ಯೇವ ಸರ್ವೇ ದೇವಾಃ। ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ, ತದು ಸೋಮಃ; ಏತಾವದ್ವಾ ಇದಂ ಸರ್ವಮ್, ಅನ್ನಂ ಚೈವಾನ್ನಾದಶ್ಚ; ಸೋಮ ಏವಾನ್ನಮ್, ಅಗ್ನಿರನ್ನಾದಃ, ಸೈಷಾ ಬ್ರಹ್ಮಣೋಽತಿಸೃಷ್ಟಿಃ। ಯಚ್ಛ್ರೇಯಸೋ ದೇವಾನಸೃಜತ, ಅಥ ಯನ್ಮರ್ತ್ಯಃ ಸನ್ನಮೃತಾನಸೃಜತ ತಸ್ಮಾದತಿಸೃಷ್ಟಿಃ; ಅತಿಸೃಷ್ಟ್ಯಾಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ॥ ೬ ॥**

ಅಥ=ಅನಂತರ ಇತಿ=ಹೀಗೆ ಅಭ್ಯಮಂಥತ್=ಮಥಿಸಿದನು, ಸಃ=ಅವನು ಯೋನೇಃ=ಉತ್ಪತ್ತಿಸ್ಥಾನವಾದ ಮುಖಾತ್=ಬಾಯಿಂದಲೂ ಹಸ್ತಾಭ್ಯಾಂ ಚ=ಕೈಗಳಿಂದಲೂ ಅಗ್ನಿಂ=ಅಗ್ನಿಯನ್ನು ಅಸೃಜತ=ಸೃಷ್ಟಿಸಿದನು, ತಸ್ಮಾತ್=ಆದುದರಿಂದ ಏತತ್ ಉಭಯಂ=ಇವೆರಡು ಅಂತರಃ=ಒಳಗಡೆ ಅಲೋಮಕಂ=ರೋಮವಿಲ್ಲದವುಗಳು. ಹಿ=ಏಕೆಂದರೆ ಯೋನಿಃ ಅಂತರತಃ ಅಲೋಮಕಾ. ತತ್=ಅಲ್ಲಿ ಅಮುಂ ಯಜ=ಇವನಿಗೆ ಯಾಗಮಾಡು ಅಮುಂ ಯಜ=ಇವನಿಗೆ ಯಾಗಮಾಡು ಇತಿ=ಎಂದು ಯತ್ ಇದಂ [ವಚಃ]=ಯಾವ ಈ ಮಾತನ್ನು ಏಕೈಕಂ ದೇವಂ=ಒಬ್ಬೊಬ್ಬ ದೇವತೆಯನ್ನು ಕುರಿತು ಆಹುಃ=ಹೇಳುವರೊ [ಅದನ್ನು ಹಾಗೆ ತಿಳಿಯಬಾರದು; ಏಕೆಂದರೆ] ಏತಸ್ಯ ಏವ=ಇವನದೇ ಸಾ ವಿಸೃಷ್ಟಿಃ=ಆ ಸೃಷ್ಟಿಯು, ಏಷಃ ಹಿ ಉ ಏವ=ಇವನೇ ಸರ್ವೇ ದೇವಾಃ=ಎಲ್ಲ ದೇವತೆಗಳಾಗಿರುತ್ತಾನೆ. ಅಥ=ಈಗ ಯತ್ ಕಿಂಚ ಇದಂ ಆರ್ದ್ರಂ= ಇನ್ನು ಈ ಯಾವ ಯಾವುದು ದ್ರವವಾಗಿರುವುದೊ ತತ್=ಅದನ್ನು ರೇತಸಃ=ರೇತಸ್ಸಿನಿಂದ ಅಸೃಜತ=ಸೃಷ್ಟಿಸಿದನು, ತತ್ ಉ ಸೋಮಃ=ಅದು ಸೋಮವು; ಇದಂ ಸರ್ವಂ=ಇದೆಲ್ಲವೂ ಏತಾವತ್ ವೈ ಏವ=ಇಷ್ಟೇ—ಅನ್ನಂ ಚ ಅನ್ನಾದಃ ಚ=ಅನ್ನ ಮತ್ತು ಅನ್ನವನ್ನು ತಿನ್ನುವವನು; ಸೋಮಃ ಏವ ಅನ್ನಂ=ಸೋಮವೇ ಅನ್ನವು, ಅಗ್ನಿಃ ಅನ್ನಾದಃ ಅಗ್ನಿಯು ಅನ್ನಾದನು; ಸಾ ಏಷಾ=ಆ ಇದು ಬ್ರಹ್ಮಣಃ=ಪ್ರಜಾಪತಿಯ ಅತಿಸೃಷ್ಟಿಃ ಅತಿಶಯವಾದ ಸೃಷ್ಟಿ ಯತ್ ಶ್ರೇಯಸಃ ದೇವಾನ್ ಅಸೃಜತ=ಯಾವ ಕಾರಣದಿಂದ [ತನಗಿಂತ] ಉತ್ಕೃಷ್ಟರಾದ ದೇವತೆಗಳನ್ನು ಸೃಷ್ಟಿಸಿದನೋ; ಅಥ ಇನ್ನು ಯತ್=ಯಾವ ಕಾರಣದಿಂದ ಮರ್ತ್ಯಃ ಸನ್=ಮೃತ್ಯನಾಗಿದ್ದು ಅಮೃತಾನ್ ಅಸೃಜತ=ಅಮೃತರನ್ನು ಸೃಷ್ಟಿಸಿದನೊ ತಸ್ಮಾತ್=ಆ ಕಾರಣದಿಂದ ಅತಿಸೃಷ್ಟಿಃ= [ಅದು] ಉತ್ಕೃಷ್ಟವಾದ ಸೃಷ್ಟಿಯು; ಯಃ ಏವಂ ವೇದ=ಯಾವನು ಹೀಗೆ ಅರಿಯುವನೊ [ಅವನು] ಅಸ್ಯ=ಇವನ ಏತಸ್ಯಾಂ ಅತಿಸೃಷ್ಟ್ಯಾಂ=ಈ ಅತಿಸೃಷ್ಟಿಯಲ್ಲಿ ಭವತಿ ಹ=ಸೃಷ್ಟಿಕರ್ತೃವಾಗುವನು.

೬. ಆನಂತರ ಅವನು ಹೀಗೆ[1] ಮಥಿಸಿದನು ಮತ್ತು ಉತ್ಪತ್ತಿಸ್ಥಾನ ನಾದ ಬಾಯಿಂದಲೂ ಕೈಗಳಿಂದಲೂ ಅಗ್ನಿಯನ್ನು ಸೃಷ್ಟಿಸಿದನು. ಆದುದ ರಿಂದ ಇವೆರಡೂ ಒಳಗೆ ರೋಮವಿಲ್ಲದವುಗಳು. 'ಇವನಿಗೆ[2] ಯಾಗಮಾಡು, ಇವನಿಗೆ[3] ಯಾಗಮಾಡು, ಎಂದು ಒಬ್ಬೊಬ್ಬ ದೇವತೆಯನ್ನು ಕುರಿತು ಯಾಜ್ಞಿಕರು ಹೇಳುವಾಗ (ಅದನ್ನು ಹಾಗೆ ತಿಳಿಯಬಾರದು,[4] ಏಕೆಂದರೆ) ಇವನದೇ ಆ ಸೃಷ್ಟಿಯು, ಇವನೇ ಎಲ್ಲ ದೇವತೆಗಳಾಗಿರುತ್ತಾನೆ, ಇನ್ನು ದ್ರವವಾಗಿರುವುದನ್ನೆಲ್ಲ ಅವನು ರೇತಸ್ಸಿನಿಂದ ಸೃಷ್ಟಿಸಿದನು. ಅದು ಸೋಮ ಇದೆಲ್ಲವೂ ಇಷ್ಟೇ—ಅನ್ನ ಮತ್ತು ಅನ್ನವನ್ನು ತಿನ್ನುವವನು. ಸೋಮವೇ ಅನ್ನ, ಅಗ್ನಿ ಅನ್ನಾದ.[5] ಪ್ರಜಾಪತಿಯು (ತನಗಿಂತ) ಉತ್ಕೃಷ್ಟರಾದ ದೇವತೆಗಳನ್ನು ಸೃಷ್ಟಿಸಿದ್ದು ಅವನ ಅತಿಶಯವಾದ ಸೃಷ್ಟಿ. ಅವನು ಮರ್ತ್ಯನಾಗಿದ್ದರೂ ಅಮೃತರನ್ನು ಸೃಷ್ಟಿಸಿದುದರಿಂದ ಅದು ಉತ್ಕೃಷ್ಟ ವಾದ ಸೃಷ್ಟಿ. ಯಾವನು ಹೀಗೆ ಅರಿಯುವನೊ (ಅವನು) ಪ್ರಜಾಪತಿಯ ಈ ಅತಿಸೃಷ್ಟಿಯಲ್ಲಿ ಸೃಷ್ಟಿಕರ್ತೃವಾಗುವನು.

[1 ಬಾಯಲ್ಲಿ ಕೈಗಳನ್ನು ಹಾಕಿಕೊಂಡು.
2 ಈ ಅಗ್ನಿಗೆ.
3 ಈ ಇಂದ್ರನಿಗೆ.
4 ಇದು ಅಜ್ಞಾನಿಗಳ ಅಭಿಪ್ರಾಯ. ಇಲ್ಲಿ ಪ್ರಕರಣದ ಉದ್ದೇಶ ಸೃಷ್ಟಿಯನ್ನು ಹೊಗಳುವುದಕ್ಕಲ್ಲ, ಸರ್ವದೇವತೆಗಳೂ ಪ್ರಜಾಪತಿ ಎಂಬುದನ್ನು ಸೂಚಿಸುವುದ ಕ್ಕಾಗಿ; ಏಕೆಂದರೆ ಸೃಷ್ಟಿಸಲ್ಪಟ್ಟ ವಸ್ತುಗಳು ಸೃಷ್ಟಿಕರ್ತೃವಿಗಿಂತ ಬೇರೆಯಲ್ಲ.
5 ಈ ಪ್ರಕಾರ ಜಗತ್ತೆಲ್ಲ ಅಗ್ನೀಷೋಮಾತ್ಮಕವಾಗಿದೆ.]

ತದ್ಧೇದಂ ತರ್ಹ್ಯವ್ಯಾಕೃತಮಾಸೀತ್, ತನ್ನಾಮರೂಪಾ-ಭ್ಯಾಮೇವ ವ್ಯಾಕ್ರಿಯತ, ಅಸೌನಾಮಾಯಮಿದಂರೂಪ ಇತಿ; ತದಿದಮಪ್ಯೇತರ್ಹಿ ನಾಮರೂಪಾಭ್ಯಾಮೇವ ವ್ಯಾಕ್ರಿಯತೇ, ಅಸೌನಾಮಾಯಮಿದಂರೂಪ ಇತಿ, ಸ ಏಷ ಇಹ ಪ್ರವಿಷ್ಟ ಆ ನಖಾಗ್ರೇಭ್ಯಃ, ಯಥಾ ಕ್ಷುರಃ ಕ್ಷುರಧಾನೇಽವಹಿತಃ ಸ್ಯಾತ್, ವಿಶ್ವಂಭರೋ ವಾ ವಿಶ್ವಂಭರಕುಲಾಯೇ; ತಂ ನ ಪಶ್ಯಂತಿ। ಅಕೃತ್ಸ್ನೋ ಹಿ ಸಃ, ಪ್ರಾಣನ್ನೇವ ಪ್ರಾಣೋ ನಾಮ ಭವತಿ,

**ವದನ್ ವಾಕ್, ಪಶ್ಯಂಶ್ಚಕ್ಷುಃ, ಶೃಣ್ವನ್ ಶ್ರೋತ್ರಂ, ಮನ್ವಾನೋ ಮನಃ, ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋಽತ ಏಕೈಕಮುಪಾಸ್ತೇ ನ ಸ ವೇದ, ಅಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತಿ; ಆತ್ಮೇತ್ಯೇವೋಪಾಸೀತ, ಅತ್ರ ಹ್ಯೇತೇ ಸರ್ವ ಏಕಂ ಭವಂತಿ। ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾ, ಅನೇನ ಹ್ಯೇತತ್ ಸರ್ವಂ ವೇದ। ಯಥಾ ಹ ವೈ ಪದೇನಾನುವಿಂದೇದೇವಂ; ಕೀರ್ತಿಂ ಶ್ಲೋಕಂ ವಿಂದತೇ ಯ ಏವಂ ವೇದ ॥ ೭ ॥**

ತರ್ಹಿ=ಆಗ ತತ್ ಹ ಇದಂ=ಆ ಈ [ಜಗತ್ತು] ಅವ್ಯಾಕೃತಂ ಆಸೀತ್=ಅವ್ಯಕ್ತವಾಗಿತ್ತು ; ತತ್=ಈ ಅವ್ಯಕ್ತವಾದ ಜಗತ್ತು ಅಯಂ=ಇದು ಅಸೌನಾಮಾ=ಈ ಹೆಸರುಳ್ಳದ್ದು, ಇದಂರೂಪಃ=ಈ ರೂಪವುಳ್ಳದ್ದು ಇತಿ=ಎಂದು ನಾಮ-ರೂಪಾಭ್ಯಾಂ ಏವ=ನಾಮರೂಪಗಳಿಂದಲೇ ವ್ಯಾಕ್ರಿಯತ=ವ್ಯಕ್ತವಾಯಿತು , ತತ್ ಇದಂ=ಆ ಇದು ಏತರ್ಹಿ ಅಪಿ=ಈಗಲೂ ಕೂಡ ಅಯಂ=ಇದು ಅಸೌ-ನಾಮಾ=ಈ ಹೆಸರುಳ್ಳದ್ದು, ಇದಂ ಸೂಪಕ=ಈ ರೂಪವುಳ್ಳದ್ದು ನಾಮ ರೂಪಾಭ್ಯಾಂ ಏವ=ನಾಮರೂಪಗಳಿಂದಲೇ ವ್ಯಾಕ್ರಿಯತೇ=ವ್ಯಕ್ತವಾಗಿದೆ , ಸಃ ಏಷಃ=ಆ ಇವನು ಇಹ=ಇಲ್ಲಿ, ಈ ಶರೀರಗಳಲ್ಲಿ ಆ ನಖಾಗ್ರೇಭ್ಯಃ=ನಖಾಗ್ರಗಳ ವರೆಗೂ ಪ್ರವಿಷ್ಟಃ ಪ್ರವೇಶಿಸಿರುತ್ತಾನೆ ಯಥಾ=ಹೇಗೆ ಕ್ಷುರಧಾನೇ=ಕ್ಷುರಕೋಶದಲ್ಲಿ ಕ್ಷುರಃ ಅವಹಿತಃ ಸ್ಯಾತ್=ಕ್ಷೌರ ಕತ್ತಿಯು ಇಡಲ್ಪಟ್ಟಿರುವುದೊ, ವಾ ಅಥವಾ ವಿಶ್ವಂಭರಃ=ವಿಶ್ವವನ್ನು ಧರಿಸಿರುವ ಅಗ್ನಿಯು ವಿಶ್ವಂಭರ=ಕುಲಾಯೇ=ತನ್ನ ಮೂಲ ವಾದ] ಸೌದೆಯಲ್ಲಿರುತ್ತದೆಯೊ]; ತಂ=ಅವನನ್ನು ನ ಪಶ್ಯಂತಿ=ನೋಡುವುದಿಲ್ಲ. ಹಿ ಏಕೆಂದರೆ ಸಃ=ಅವನು ಅಕೃತ್ಸ್ನಃ-ಅಸಂಪೂರ್ಣನಾಗಿರುವನು ; ಪ್ರಾಣನ್ ಏವ=ಪ್ರಾಣನ ಕ್ರಿಯೆಯನ್ನು ಮಾಡುವಾಗ ಪ್ರಾಣಃ ನಾಮ ಭವತಿ=ಪ್ರಾಣನೆಂಬ ಹೆಸರಾಗುತ್ತದೆ. ವದನ್=ಮಾತನಾಡುವಾಗ ವಾಕ್=ವಾಕ್ಕು, ಪಶ್ಯನ್=ನೋಡುವಾಗ ಚಕ್ಷುಃ=ಕಣ್ಣು, ಶೃಣ್ವನ್=ಕೇಳುವಾಗ ಶ್ರೋತ್ರಂ=ಶ್ರೋತ್ರ, ಮನ್ವಾನಃ=ಮನನ ಮಾಡುವಾಗ ಮನಃ=ಮನಸ್ಸು ; ತಾನಿ ಏತಾನಿ=ಆ ಇವು ಅಸ್ಯ=ಇವನಿಗೆ ಕರ್ಮನಾಮಾನಿ ಏವ=ಕರ್ಮದಿಂದ ಉಂಟಾಗಿರುವ ಹೆಸರುಗಳೇ. ಸಃ ಯಃ=ಆ ಯಾವನು ಅತಃ=ಪ್ರಾಣನಾದಿ ಕ್ರಿಯಾಸಮುದಾಯದಲ್ಲಿ ಏಕೈಕಂ=ಒಂದೊಂದನ್ನು ಉಪಾಸ್ತೇ=ಉಪಾಸಿಸುತ್ತಾನೆಯೊ ಸಃ=ಅವನು ನ ವೇದ=ಅರಿಯನು ; ಹಿ=ಏಕೆಂದರೆ ಏಷಃ=ಇವನು ಅತಃ ಏಕೈಕೇನ=ಈ ಸಮುದಾಯದಲ್ಲಿ ಒಂದೊಂದರಿಂದ ಅಕೃತ್ಸ್ನಃ ಭವತಿ=ಅಸಂಪೂರ್ಣನಾಗಿರುತ್ತಾನೆ. ಆತ್ಮಾ ಇತಿ ಏವ=ಆತ್ಮನೆಂದೇ ಉಪಾಸೀತ=ಉಪಾಸಿಸಬೇಕು ; ಹಿ=ಏಕೆಂದರೆ ಅತ್ರ=ಇಲ್ಲಿ ಏತೇ ಸರ್ವೇ=ಇವೆಲ್ಲವೂ ಏಕಂ ಭವಂತಿ=

ಒಂದಾಗುವುವು. ಅಸ್ಯ ಸರ್ವಸ್ಯ=ಇವುಗಳೆಲ್ಲೆಲ್ಲ, ಈ ಸಮುದಾಯದ ಮಧ್ಯದಲ್ಲಿ ತತ್ ಏತತ್=ಆ ಇದು—ಯತ್ ಅಯಂ ಆತ್ಮಾ=ಯಾವ ಈ ಆತ್ಮನು—ಪದ ನೀಯಂ=ಅರಿಯಲ್ಪಡತಕ್ಕದ್ದು, ಯಥಾ ಹ ವೈ=ಹೇಗೆ ಪದೇನ=ಪದ ಚಿಹ್ನೆಯ ಮೂಲಕ [ಕಳದು ಹೋದ ಪಶುವನ್ನು] ಅನುವಿಂದೇತ್=ಹುಡುಕಿ ಪಡೆಯಬಹುದೊ ಏವಂ=ಹಾಗೆಯೇ ಅನೇನ= ಇದರಿಂದ ಏತತ್ ಸರ್ವಂ=ಇದೆಲ್ಲವನ್ನೂ ವೇದ=ಅರಿ ಯುತ್ತಾನೆಯೊ [ಅವನು] ಕೀರ್ತಿಂ=ಕೀರ್ತಿಯನ್ನು ಶ್ಲೋಕಂ=ಇಷ್ಟರ ಸಂಬಂಧ ವನ್ನು ವಿಂದತೇ=ಪಡೆಯುತ್ತಾನೆ.

೭. ಆ ಈ (ಜಗತ್ತು) ಆಗ[1] ಅವ್ಯಕ್ತವಾಗಿತ್ತು. 'ಇದು ಈ ಹೆಸರು ಳ್ಳದ್ದು, ಈ ರೂಪವುಳ್ಳದ್ದು' ಎಂದು ಈ ಅವ್ಯಕ್ತವಾದ ಜಗತ್ತು ನಾಮ ರೂಪಗಳಿಂದಲೇ[2] ವ್ಯಕ್ತವಾಯಿತು. ಆ ಈ ಜಗತ್ತು ಈಗಲೂ ಕೂಡ 'ಇದು ಈ ಹೆಸರುಳ್ಳದ್ದು. ಈ ರೂಪವುಳ್ಳದ್ದು' ಎಂದು ನಾಮರೂಪಗಳಿಂದಲೇ ವ್ಯಕ್ತವಾಗಿದೆ. ಕ್ಷೌರಕತ್ತಿಯು ಕ್ಷುರಕೋಶದಲ್ಲಿ ಹೇಗೆ ಇಡಲ್ಪಟ್ಟಿರು ವುದೊ, ವಿಶ್ವವನ್ನು ಧರಿಸಿರುವ ಅಗ್ನಿಯು ತನ್ನ ಮೂಲವಾದ (ಸೌದೆ ಯಲ್ಲಿ) ಹೇಗೆ ಇರುತ್ತದೆಯೋ ಹಾಗೆ ಆ ಈ ಆತ್ಮನು ಈ ಶರೀರಗಳಲ್ಲಿ[3] ನಖಾಗ್ರಗಳವರೆಗೂ ಪ್ರವೇಶಿಸಿರುತ್ತಾನೆ. (ಜನರು) ಅವನನ್ನು ನೋಡು ವುದಿಲ್ಲ.[4] ಏಕೆಂದರೆ ಅವನು ಅಸಂಪೂರ್ಣನಾಗಿರುವನು, ಅವನು ಪ್ರಾಣನ ಕ್ರಿಯೆಯನ್ನು ಮಾಡುವಾಗ ಪ್ರಾಣನೆಂದೂ, ಮಾತನಾಡುವಾಗ ವಾಕ್ಕೆಂದೂ, ನೋಡುವಾಗ ಕಣ್ಣೆಂದೂ ಕೇಳುವಾಗ ಶ್ರೋತ್ರವೆಂದೂ, ಮನನಮಾಡು ವಾಗ ಮನಸ್ಸೆಂದೂ ಕರೆಯಲ್ಪಡುತ್ತಾನೆ. ಇವನಿಗೆ ಆ ಇವು ಕರ್ಮದಿಂದ ಉಂಟಾಗಿರುವ ಹೆಸರುಗಳೇ.[5] ಯಾವನು ಪ್ರಾಣನಾದಿ-ಕ್ರಿಯಾ-ಸಮುದಾ ಯದಲ್ಲಿ ಒಂದೊಂದನ್ನು ಉಪಾಸಿಸುತ್ತಾನೆಯೊ ಅವನು ಅರಿಯನು; ಏಕೆಂದರೆ ಈ ಆತ್ಮನು ಪ್ರಾಣನ ಕ್ರಿಯಾಸಮುದಾಯದ ಒಂದೊಂದು (ವಿಶೇಷ ಗುಣದಿಂದ) ಅಸಂಪೂರ್ಣನಾಗಿರುತ್ತಾನೆ. ಆತ್ಮನನ್ನೇ ಉಪಾ ಸಿಸಬೇಕು, ಏಕೆಂದರೆ ಇವನಲ್ಲಿ ಇವೆಲ್ಲವೂ ಒಂದಾಗುವುವು. ಈ ಸಮುದಾ ಯದ ಮಧ್ಯದಲ್ಲಿ ಈ ಆತ್ಮನನ್ನೆ ಅರಿಯಬೇಕು; ಏಕೆಂದರೆ ಪದಚಿಹ್ನೆಯ ಮೂಲಕ (ಕಳೆದುಹೋದ ಪಶುವನ್ನು) ಹೇಗೆ ಹುಡುಕಿ ಪಡೆಯಬಹುದೊ ಹಾಗೆಯೇ ಈ ಆತ್ಮನಿಂದ ಇವೆಲ್ಲವನ್ನೂ ಅರಿಯುತ್ತಾನೆ. ಯಾವನು ಹೀಗೆ

ಅರಿಯುತ್ತಾನೆಯೊ (ಅವನು) ಕೀರ್ತಿಯನ್ನೂ ಇಷ್ಟರ ಸಂಬಂಧವನ್ನೂ ಪಡೆಯುತ್ತಾನೆ.[6]

[ಜ್ಞಾನ–ಕರ್ಮ–ಲಕ್ಷಣವಾಗಿರುವ, ಕರ್ತೃವೇ ಮೊದಲಾದ ಅನೇಕ ಕಾರಕಗಳನ್ನು ಅಪೇಕ್ಷಿಸುವ ಎಲ್ಲ ವೈದಿಕ ಸಾಧನವೂ ಮತ್ತು ಪ್ರಜಾಪತಿತ್ವವೆಂಬ ಫಲದಲ್ಲಿ ಅವಸಾನವಾಗುವ ಸಾಧ್ಯವೂ ಈ ವ್ಯಾಕೃತಜಗತ್ತೆಂಬ ಸಂಸಾರದಲ್ಲಿ ಅಂತರ್ಗತವಾಗಿವೆ ಈಗ ಶ್ರುತಿಯು ವ್ಯಾಕೃತಜಗತ್ತು ವ್ಯಕ್ತವಾಗುವುದಕ್ಕೆ ಮೊದಲು ಇದ್ದ ಬೀಜಾವಸ್ಥೆಯನ್ನು ತಿಳಿಸುತ್ತದೆ. ಈ ಸಂಸಾರವೃಕ್ಷಕ್ಕೆ ಕರ್ಮವು ಬೀಜ, ಅವಿದ್ಯೆಯು ಕ್ಷೇತ್ರ. ಸಂಸಾರವೃಕ್ಷವನ್ನು ಸಮೂಲವಾಗಿ ಕಿತ್ತುಹಾಕಿದರೆ ಪುರುಷಾರ್ಥಪ್ರಾಪ್ತಿಯಾಗುವುದು. ಕಾರಕದಲ್ಲಿ (೨, ೬, ೧) ಮತ್ತು ಗೀತೆಯಲ್ಲಿ (೧೫, ೧) ಪ್ರಸಿದ್ಧವಾದ ಅಶ್ವತ್ಥವೃಕ್ಷವು ಇದೇ.

1 ಉತ್ಪತ್ತಿಗೆ ಮೊದಲು.

2 ನಿಯಂತೃ, ಕರ್ತೃ, ಸಾಧನ, ಕ್ರಿಯೆ, ನಿಮಿತ್ತ—ಇವುಗಳ ಸಹಾಯದಿಂದ ವ್ಯಕ್ತೀಭಾವವನ್ನು ಪಡೆಯಿತು.

3 ಕರ್ಮಫಲಗಳಿಗೆ ಆಶ್ರಯವಾಗಿರುವ ಬ್ರಹ್ಮಾದಿಸ್ತಂಬಪರ್ಯಂತ ಸಮಸ್ತ ಪ್ರಾಣಿಗಳ ಶರೀರಗಳಲ್ಲಿ ಪ್ರವೇಶಿಸಿದನು. ಸೃಷ್ಟಿ ಪ್ರವೇಶ ಸ್ಥಿತಿ ಪ್ರಳಯ ಮೊದಲಾದ ವಾಕ್ಯಗಳು ಜ್ಞಾನೋಪದೇಶಕ್ಕೆ ಬಂದಿವೆ. ಸೃಷ್ಟ್ಯಾದಿವಾಕ್ಯಗಳಿಗೆ ಆತ್ಮೈಕದರ್ಶನದಲ್ಲಿಯೇ ತಾತ್ಪರ್ಯವಿದೆ ಆತ್ಮನು ಜಗತ್ತಿನಲ್ಲಿಯೇ ಕಂಡುಬರುತ್ತಾನೆ ಎಂಬುದನ್ನು ತಿಳಿಸಲು ಪ್ರವೇಶಶ್ರುತಿಯು ಬಂದಿರುತ್ತದೆ.

4 ಕಾರ್ಯದಲ್ಲಿರುವ ಆತ್ಮನನ್ನು ನೋಡಿದವರು ಅರಿಯರು.

5 ಪೂರ್ಣವಾದ ಆತ್ಮವಸ್ತುವನ್ನು ಪ್ರಕಾಶಿಸುವ ನಾಮವಲ್ಲ.

6 ಕೀರ್ತಿಶಬ್ದವು ಐಕ್ಯಜ್ಞಾನವನ್ನೂ ಶ್ಲೋಕಶಬ್ದವು ಮುಕ್ತಿಯನ್ನೂ ಸೂಚಿಸುತ್ತದೆ.]

**ತದೇತತ್ ಪ್ರೇಯಃ ಪುತ್ರಾತ್, ಪ್ರೇಯೋ ವಿತ್ತಾತ್, ಪ್ರೇಯೋಽನ್ಯಸ್ಮಾತ್ ಸರ್ವಸ್ಮಾತ್, ಅಂತರತರಂ ಯದಯಮಾತ್ಮಾ। ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್, ಪ್ರಿಯಂ ರೋತ್ಸ್ಯತೀತಿ, ಈಶ್ವರೋ ಹ, ತಥೈವ ಸ್ಯಾತ್, ಆತ್ಮಾನಮೇವ ಪ್ರಿಯಮುಪಾಸೀತ; ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ ॥ ೮ ॥**

ತತ್ ಏತತ್=ಆ ಈ [ಆತ್ಮತತ್ತ್ವಂ=ಆತ್ಮತತ್ತ್ವವು] ಪುತ್ರಾತ್=ಮಗ= ಗಿಂತಲೂ ಪ್ರೇಯಃ=ಪ್ರಿಯತರವು, ವಿತ್ತಾತ್=ಸಂಪತ್ತಿಗಿಂತಲೂ ಪ್ರೇಯಃ, ಅನ್ಯ- ಸ್ಮಾತ್ ಸರ್ವಸ್ಮಾತ್=ಇತರ ಎಲ್ಲಕ್ಕಿಂತಲೂ ಪ್ರೇಯಃ, ಯತ್ ಅಯಂ ಆತ್ಮಾ=ನಿ ಯಾವ ಈ ಆತ್ಮತತ್ತ್ವವು ಅಂತರತರಂ=ಅಂತರತರವು ಸಃ ಯಃ=ಆ ಯಾವನು ಆತ್ಮನಃ ಅನ್ಯಂ ಪ್ರಿಯಂ ಬ್ರುವಾಣಂ=ಆತ್ಮನಿಗಿಂತ ಬೇರೆಯಾದುದನ್ನು ಪ್ರಿಯವೆಂದು ಹೇಳುವವನನ್ನು ಕುರಿತು ಬ್ರೂಯಾತ್=ಹೇಳುವನು—ಪ್ರಿಯಂ=[ನಿನಗೆ] ಪ್ರಿಯ ವಾಗಿರುವುದು ರೋತ್ಸ್ಯತಿ=ಸಾಯುತ್ತದೆ ಇತಿ=ಎಂದು. ತಥಾ ಏವ=ಹಾಗೆಯೇ ಸ್ಯಾತ್=ಆಗುವುದು; ಈಶ್ವರಃ ಹ=ಅವನು ಸಮರ್ಥನಾಗಿರುವನು; ಆತ್ಮಾನಂ ಏವ=ಆತ್ಮನನ್ನೇ ಪ್ರಿಯಂ ಉಪಾಸೀತ=ಪ್ರಿಯವೆಂದು ಉಪಾಸಿಸಬೇಕು; ಸಃ ಯಃ= ಆ ಯಾವನು ಆತ್ಮಾನಂ ಏವ ಪ್ರಿಯಂ ಉಪಾಸ್ತೇ=ಆತ್ಮನನ್ನೇ ಪ್ರಿಯನೆಂದು ಉಪಾಸಿಸುವನೊ ಅಸ್ಯ=ಅವನಿಗೆ ಪ್ರಿಯಂ=ಪ್ರಿಯವಾದುದು ಪ್ರಮಾಯುಕಂ ನ ಹ ಭವತಿ=ಮರಣಶೀಲವಾಗುವುದಿಲ್ಲ.

೮. ಆ ಈ (ಆತ್ಮತತ್ತ್ವವು) ಮಗನಿಗಿಂತಲೂ ಪ್ರಿಯತರವು, ಸಂಪತ್ತಿ ಗಿಂತಲೂ ಪ್ರಿಯತರವು, ಇತರ ಎಲ್ಲಕ್ಕಿಂತಲೂ ಪ್ರಿಯತರವು; ಏಕೆಂದರೆ ಈ ಆತ್ಮತತ್ತ್ವವು (ಎಲ್ಲಕ್ಕಿಂತಲೂ) ಅಂತರತಮವಾಗಿರುವುದು. (ಆತ್ಮನನ್ನು ಪ್ರಿಯತರವೆಂದು) ಅರಿತಿರುವವನು ಆತ್ಮನಿಗಿಂತ ಬೇರೆಯಾದುದನ್ನು ಪ್ರಿಯ ವೆಂದು ಹೇಳುವವನನ್ನು ಕುರಿತು, 'ನಿನಗೆ ಪ್ರಿಯವಾದುದು ಸಾಯುತ್ತದೆ,' ಎಂದು ಹೇಳಿದರೆ ಅದು ಹಾಗೆಯೇ ಆಗುವುದು; (ಏಕೆಂದರೆ) ಅವನು ಹಾಗೆ ಹೇಳಲು ಸಮರ್ಥನಾಗಿರುವನು. ಯಾವನು ಆತ್ಮನನ್ನೇ ಪ್ರಿಯನೆಂದು ಉಪಾಸಿಸುವನೊ ಅವನಿಗೆ ಪ್ರಿಯವಾದುದು ಸಾಯುವುದಿಲ್ಲ.

[ಇತರ ವಸ್ತುಗಳನ್ನು ಅನಾದರಿಸಿ ಆತ್ಮತತ್ತ್ವವನ್ನೇ ಏಕೆ ಅರಿತುಕೊಳ್ಳ ಬೇಕೆಂದು ತಿಳಿಸಲು ಇನ್ನೊಂದು ಕಾರಣವನ್ನು ಕೊಟ್ಟಿದೆ.]

**ತದಾಹುಃ, ಯದ್ 'ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಂತಃ' ಮನುಷ್ಯಾ ಮನ್ಯಂತೇ, ಕಿಮು ತದ್ಬ್ರಹ್ಮಾವೇದ್ ಯಸ್ಮಾತ್ ತತ್ ಸರ್ವಮಭವದಿತಿ ॥ ೯ ॥**

[ಮುಮುಕ್ಷುಗಳು] ತತ್ ಆಹುಃ=ಇದನ್ನು ಹೇಳುತ್ತಾರೆ: ಬ್ರಹ್ಮವಿದ್ಯಯಾ= ಬ್ರಹ್ಮವಿದ್ಯೆಯಿಂದ ಸರ್ವಂ=ಎಲ್ಲವೂ ಭವಿಷ್ಯಂತಃ=ಆಗುವೆವು [ಇತಿ=ಎಂದು] ಮನುಷ್ಯಾಃ=ಮನುಷ್ಯರು ಯತ್ ಮನ್ಯಂತೇ=ಯಾವುದನ್ನು ಯೋಚಿಸುತ್ತಾರೆಯೊ ತತ್ ಬ್ರಹ್ಮ=ಆ ಬ್ರಹ್ಮವು ಕಿಂ ಉ ಅವೇತ್=ಏನು ಅರಿತುಕೊಂಡಿತು? ಯಸ್ಮಾತ್ ಯಾವುದರಿಂದ ತತ್=ಅದು ಸರ್ವಂ ಅಭವತ್=ಎಲ್ಲವೂ ಆಯಿತೊ ಇತಿ=ಎಂದು.

೯. ಮುಮುಕ್ಷುಗಳು ಇದನ್ನು ಹೇಳುವರು : 'ಬ್ರಹ್ಮವಿದ್ಯೆಯಿಂದ ನಾವು ಎಲ್ಲವೂ ಆಗುತ್ತೇವೆ, ಎಂದು ಮನುಷ್ಯರು ಯೋಚಿಸುತ್ತಾರೆ. ಸರಿ, ಆ ಬ್ರಹ್ಮವು ಯಾವುದನ್ನು ಅರಿತುಕೊಂಡು, ಅದರಿಂದ ಎಲ್ಲವೂ ಆಯಿತು?[1]

['ಆತ್ಮನನ್ನೇ ಉಪಾಸಿಸಬೇಕು' (೧, ೪, ೭) ಎಂಬ ವಾಕ್ಯದಲ್ಲಿ ಉಪನಿಷತ್ತಿನ ಉದ್ದೇಶವಾದ ಬ್ರಹ್ಮವಿದ್ಯೆಯು ಸೂತ್ರರೂಪವಾಗಿ ಹೇಳಲ್ಪಟ್ಟಿತು. ಈ ಸೂತ್ರವನ್ನು ವಿವರಿಸಲು ಈ ಮಂತ್ರವು ಬಂದಿದೆ.

[1] ಈ ಆಕ್ಷೇಪಣೆಗೆ ಉತ್ತರವನ್ನು ಮುಂದಿನ ಮಂತ್ರದಲ್ಲಿ ಹೇಳಿದೆ ]

**ಬ್ರಹ್ಮ ವಾ ಇದಮಗ್ರ ಆಸೀತ್, ತದಾತ್ಮಾನಮೇವಾವೇತ್, ಅಹಂ ಬ್ರಹ್ಮಾಸ್ಮೀತಿ। ತಸ್ಮಾತ್ ತತ್ಸರ್ವಮಭವತ್; ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್, ತಥರ್ಷೀಣಾಂ, ತಥಾ ಮನುಷ್ಯಾಣಾಂ; ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇ, ಅಹಂ ಮನುರಭವಂ ಸೂರ್ಯಶ್ಚೇತಿ। ತದಿದಮಪ್ಯೇತರ್ಹಿ ಯ ಏವಂ ವೇದ, ಅಹಂ ಬ್ರಹ್ಮಾಸ್ಮೀತಿ, ಸ ಇದಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚನಾಭೂತ್ಯಾ ಈಶತೇ, ಆತ್ಮಾ ಹ್ಯೇಷಾಂ ಸ ಭವತಿ; ಅಥ ಯೋಽನ್ಯಾಂ ದೇವತಾಮುಪಾಸ್ತೇ, ಅನ್ಯೋಽಸಾವನ್ಯೋಽಹಮಸ್ಮೀತಿ, ನ ಸ ವೇದ, ಯಥಾ ಪಶುರೇವಂ ಸ ದೇವಾನಾಮ್। ಯಥಾ ಹ ವೈ ಬಹವಃ ಪಶವೋ ಮನುಷ್ಯಂ ಭುಂಜ್ಯುಃ, ಏವಮೇಕೈಕಃ ಪುರುಷೋ ದೇವಾನ್ ಭುನಕ್ತಿ; ಏಕಸ್ಮಿನ್ನೇವ ಪಶಾವಾದೀಯಮಾನೇಽಪ್ರಿಯಂ ಭವತಿ, ಕಿಮು ಬಹುಷು? ತಸ್ಮಾದೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ ॥ ೧೦ ॥**

ಇದಂ=ಇದು ಅಗ್ರೇ=ಮೊದಲು ಬ್ರಹ್ಮ ವೈ=ಬ್ರಹ್ಮವೇ ಆಸೀತ್=ಆಗಿತ್ತು ; ತತ್=ಅದು ಆತ್ಮಾನಂ ಏವ=ತನ್ನನ್ನೇ ಅಹಂ ಬ್ರಹ್ಮ ಅಸ್ಮಿ=ನಾನು ಬ್ರಹ್ಮವಾಗಿರುವೆನು ಇತಿ=ಎಂದು ಅವೇತ್=ಅರಿತುಕೊಂಡಿತು. ತಸ್ಮಾತ್=ಅದುದರಿಂದ ತತ್=ಅದು ಸರ್ವಂ ಅಭವತ್=ಎಲ್ಲವೂ ಆಯಿತು , ತತ್ರ=ಅಲ್ಲಿ ದೇವಾನಾಂ=ದೇವತೆಗಳಲ್ಲಿ ಯಃ ಯಃ=ಯಾವಯಾವನು ಪ್ರತ್ಯಬುಧ್ಯತ=ತಿಳಿದುಕೊಂಡನೊ ಸಃ ಏವ=ಅವನೇ ತತ್ ಅಭವತ್=ಅದಾದನು. ಋಷೀಣಾಂ=ಋಷಿಗಳಲ್ಲಿ ತಥಾ=ಹಾಗೆಯೇ, ಮನುಷ್ಯಾಣಾಂ=ಮನುಷ್ಯರಲ್ಲಿಯೂ ತಥಾ=ಹಾಗೆಯೇ, ಏತತ್=ಇದನ್ನು, ಆತ್ಮನನ್ನು

ತತ್=ಅದು, ಬ್ರಹ್ಮ [ಎಂದು] ಋಷಿಃ ವಾಮದೇವಃ= ಋಷಿಯಾದ ವಾಮದೇವನು ಪ್ರತಿಪೇದೇ ಹ=ತಿಳಿದುಕೊಂಡನು—ಅಹಂ=ನಾನು ಮನುಃ ಸೂರ್ಯಃ ಚ= ಮನುವೂ ಸೂರ್ಯನೂ ಅಭವಂ=ಆಗಿದ್ದೆನು. ಏತರ್ಹಿ ಅಪಿ=ಈಗಲೂ ತತ್ ಇದಂ= ಆ ಇದನ್ನು ಯಃ=ಯಾವನು ಅಹಂ ಬ್ರಹ್ಮ ಅಸ್ಮಿ ಇತಿ ಏವಂ=ಹೀಗೆ ವೇದ=ತಿಳಿದು ಕೊಳ್ಳುವನೊ ಸಃ=ಅವನು ಇದಂ ಸರ್ವಂ ಭವತಿ=ಇದೆಲ್ಲವೂ ಆಗುತ್ತಾನೆ; ದೇವಾಃ ಚನ=ದೇವತೆಗಳೂ ತಸ್ಯ=ಅವನ ಅಭೂತ್ಯೈ=[ಬ್ರಹ್ಮಭಾವ ಪ್ರಾಪ್ತಿಯ] ಅಭಾವ ವನ್ನುಂಟುಮಾಡಲು ನ ಈಶತೇ ಹ=ಸಮರ್ಥರಾಗಲಾರರು, ಹಿ=ಏಕೆಂದರೆ ಸಃ= ಅವನು ಏಷಾಂ=ಇವರ ಆತ್ಮಾ ಭವತಿ=ಆತ್ಮನಾಗಿರುತ್ತಾನೆ; ಅಥ=ಇನ್ನು ಯಃ ಯಾವನು ಅಸೌ ಅನ್ಯಃ=ಅವನು ಬೇರೆ, ಅಹಂ ಅನ್ಯಃ ಅಸ್ಮಿ=ನಾನು ಬೇರೆಯಾಗಿ ದ್ದೇನೆ ಇತಿ=ಎಂದು ಅನ್ಯಾಂ ದೇವತಾಂ=ಬೇರೆ ದೇವತೆಯನ್ನು ಉಪಾಸ್ತೇ=ಉಪಾಸಿ ಸುತ್ತಾನೆಯೊ ಸಃ=ಅವನು ನ ವೇದ=ಅರಿಯನು; ಯಥಾ ದೇವಾನಾಂ ಪಶುಃ ದೇವತೆ ಗಳಿಗೆ ಪಶುವು ಹೇಗೊ ಸಃ ಏವಂ=ಅವನು ಹಾಗೆಯೇ. ಯಥಾ ಹ ವೈ=ಹೇಗೆ ಬಹವಃ=ಬಹು ಪಶವಃ=ಪಶುಗಳು, ಮನುಷ್ಯಂ=ಮನುಷ್ಯನನ್ನು ಭುಂಜ್ಯುಃ= ಸೇವಿ ಸುವುವೊ ಏವಂ=ಹಾಗೆ ಏಕೈಕಃ ಪುರುಷಃ=ಒಬ್ಬೊಬ್ಬ ಮನುಷ್ಯನು ದೇವಾನ್= ದೇವತೆಗಳನ್ನು ಭುನಕ್ತಿ=ಸೇವಿಸುತ್ತಾನೆ, ಏಕಸ್ಮಿನ್ ಏವ=ಒಂದೇ ಪಶೌ ಆದೀಯ ಮಾನೇ=ಪಶುವನ್ನು ತೆಗೆದುಕೊಂಡು ಹೋದರೂ ಅಪ್ರಿಯಂ ಭವತಿ=ಅಪ್ರಿಯ ವಾಗುವುದು, ಕಿಮು ಬಹುಷು=ಬಹು [ಪಶುಗಳನ್ನು ತೆಗೆದುಕೊಂಡು ಹೋದರೆ] ಹೇಳುವುದೇನು ? ತಸ್ಮಾತ್=ಆದುದರಿಂದ ಏಷಾಂ=ಅವರಿಗೆ ತತ್=ಅದು ನ ಪ್ರಿಯಂ ಪ್ರಿಯವಲ್ಲ, ಯತ್=ಯಾವುದೆಂದರೆ ಮನುಷ್ಯಾಃ=ಮನುಷ್ಯರು ಏತತ್=ಇದನ್ನು ವಿದ್ಯುಃ=ತಿಳಿಯುವರು

೧೦. ಇದು[1] ಮೊದಲು ಬ್ರಹ್ಮವೇ ಆಗಿತ್ತು. 'ನಾನು ಬ್ರಹ್ಮವಾಗಿರು ವೆನು' ಎಂದು ಅದು ತನ್ನನ್ನೇ ಅರಿತುಕೊಂಡಿತು.[2] ಆದುದರಿಂದ ಅದು ಎಲ್ಲವೂ ಆಯಿತು.[3] ದೇವತೆಗಳಲ್ಲಿ ಯಾವಯಾವನು (ಅದನ್ನು) ತಿಳಿದು ಕೊಂಡನೊ ಅವನೇ ಅದಾದನು; ಹಾಗೆಯೇ ಋಷಿಗಳಲ್ಲಿಯೂ ಮತ್ತು ಮನುಷ್ಯರಲ್ಲಿಯೂ.[4] ಋಷಿ ವಾಮದೇವನು ಇದನ್ನು ಅದು ಎಂದು ಸಾಕ್ಷಾ ತ್ಕರಿಸಿದಾಗ 'ನಾನು ಮನು ಮತ್ತು ಸೂರ್ಯ' ಎಂದು ಅರಿತುಕೊಂಡನು. ಈಗಲೂ ಯಾವನು ಆ ಇದನ್ನು 'ನಾನು ಬ್ರಹ್ಮವಾಗಿರುತ್ತೇನೆ' ಎಂದು ಹೀಗೆ ತಿಳಿದುಕೊಳ್ಳುವನೊ ಅವನು ಇದೆಲ್ಲವೂ ಆಗುತ್ತಾನೆ. ದೇವತೆ ಗಳು ಅವನ (ಬ್ರಹ್ಮಭಾವಪ್ರಾಪ್ತಿಯ) ಅಭಾವನ್ನುಂಟುಮಾಡಲು ಸಮರ್ಥ

ರಾಗಲಾರರು[5], ಏಕೆಂದರೆ ಅವನು ಇವರ ಆತ್ಮನಾಗಿರುತ್ತಾನೆ. ಇನ್ನು ಯಾವನು 'ಇವನು ಬೇರೆ, ನಾನು ಬೇರೆ' ಎಂದು ಬೇರೆ ದೇವತೆಯನ್ನು ಉಪಾಸಿಸುತ್ತಾನೆಯೊ ಅವನು ಅರಿಯನು. ಅವನು ದೇವತೆಗಳಿಗೆ ಪಶುವು ಹೇಗೊ ಹಾಗೆ. ಹೇಗೆ ಬಹುಪಶುಗಳು ಮನುಷ್ಯನನ್ನು ಸೇವಿಸುವುವೊ ಹಾಗೆ ಒಬ್ಬೊಬ್ಬ ಮನುಷ್ಯನು ದೇವತೆಗಳನ್ನು ಸೇವಿಸುತ್ತಾನೆ. ಒಂದೇ ಪಶುವನ್ನು ತೆಗೆದುಕೊಂಡು ಹೋದರೂ ಅದರಿಂದ ಅವನಿಗೆ ಅಪ್ರಿಯವಾಗುತ್ತದೆ ಬಹುಪಶುಗಳ ವಿಚಾರದಲ್ಲಿ ಹೇಳತಕ್ಕದ್ದೇನು ? ಆದುದರಿಂದ ಮನುಷ್ಯರು ಇದನ್ನು ಅರಿತುಕೊಳ್ಳುವುದು ಅವರಿಗೆ ಪ್ರಿಯವಲ್ಲ.[6]

[[1] ಶರೀರದಲ್ಲಿದ್ದುಕೊಂಡು ಆತ್ಮನೆಂದು ಹೇಳಲ್ಪಡುವುದು. ಇದು ತತ್ತ್ವವನ್ನು ಅರಿತುಕೊಳ್ಳುವ ಮೊದಲು ಬ್ರಹ್ಮವೇ ಆಗಿತ್ತು. ಆದರೆ ಅಪ್ರತಿಬೋಧದಿಂದ 'ನಾನು ಅಬ್ರಹ್ಮ ಅಸರ್ವ' ಎಂದು ತನ್ನಲ್ಲಿ ಅಧ್ಯಾರೋಪಿಸಿಕೊಂಡಿತ್ತು

[2] ದಯಾಳುವಾದ ಆಚಾರ್ಯನು 'ನೀನು ಸಂಸಾರಿಯಲ್ಲ' ಎಂದು ಉಪದೇಶಿಸಲು ಅವಿದ್ಯೆಯಿಂದ ಅಧ್ಯಾರೋಪಿತವಾದ ವಿಶೇಷಗಳಿಲ್ಲದ ತನ್ನನ್ನೇ ಅರಿತುಕೊಂಡನು. 'ತನ್ನನ್ನು ಅರಿತುಕೊಂಡಿತು' ಎಂದರೆ 'ಆತ್ಮನನ್ನು ವಿಷಯೀಕರಿಸಿತು' ಎಂದು ತಿಳಿಯಕೂಡದು. ಅಜ್ಞಾನದಿಂದ ಉಂಟಾದ ಅಧ್ಯಾರೋಪಣೆಯ ನಿವೃತ್ತಿಯೇ ಶ್ರುತಿಯ ತಾತ್ಪರ್ಯ.

[3] ಅಬ್ರಹ್ಮದ ಅಧ್ಯಾರೋಪವು ತೊಲಗಲು ಅದರ ಕಾರ್ಯವಾದ ಅಸರ್ವತ್ವವು ಹೋಗಿ ಅದು ಎಲ್ಲವೂ ಆಯಿತು.

[4] ಸರ್ವಭಾವವನ್ನು ಯಾರು ಬೇಕಾದರೂ ಪಡೆಯಬಹುದು ; ವೀರ್ಯಾತಿಶಯವುಳ್ಳ ದೇವತೆಗಳಾಗಲಿ ಮಹಾವೀರ್ಯನಾದ ಋಷಿ ವಾಮದೇವನಾಗಲಿ ಆಗಿರಬೇಕೆಂಬ ನಿಯಮವಿಲ್ಲ.

[5] ಬ್ರಹ್ಮಪ್ರಾಪ್ತಿಫಲವು ವಿದ್ಯಾಕಾಲದಲ್ಲಿ ಉಂಟಾಗುವುದು. ಆಗ ಅವಿದ್ಯೆಯ ಕಾರ್ಯವು ಇಲ್ಲದಿರುವುದರಿಂದ ಯಾರಿಗೂ ವಿಘ್ನವನ್ನುಂಟುಮಾಡಲು ಶಕ್ತಿಯಿರುವುದಿಲ್ಲ.

[6] 'ಅರ್ಜುನ, ದೇವಲೋಕವು ಕರ್ಮವಂತರಿಂದ ತುಂಬಲ್ಪಟ್ಟಿದೆ. ಮನುಷ್ಯರು ಇವರನ್ನು ಮೀರಿಹೋಗುವುದು ದೇವತೆಗಳಿಗೆ ಇಚ್ಛೆಯಿಲ್ಲ' ಕ್ರಿಯಾವದ್ಭಿರ್ಹಿ ಕೌಂತೇಯ ದೇವಲೋಕಃ ಸಮಾವೃತಃ । ನ ಚೈತದಿಷ್ಟಂ ದೇವಾನಾಂ ಮರ್ತ್ಯೈರುಪರಿವರ್ತನಮ್ ॥ (ಮಹಾಭಾರತ, ೧೪, ೨೦, ೫೯).]

**ಬ್ರಹ್ಮ ವಾ ಇದಮಗ್ರ ಆಸೀದೇಕಮೇವ; ತದೇಕಂ ಸನ್ನ ವ್ಯಭವತ್। ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ, ಯಾನ್ಯೇತಾನಿ**

**ದೇವತ್ರಾ ಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ। ತಸ್ಮಾತ್ ಕ್ಷತ್ರಾತ್ ಪರಂ ನಾಸ್ತಿ ; ತಸ್ಮಾದ್ ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ, ಕ್ಷತ್ರ ಏವ ತದ್ಯಶೋ ದಧಾತಿ; ಸೈಷಾ ಕ್ಷತ್ರಸ್ಯ ಯೋನಿರ್ಯದ್ಬ್ರಹ್ಮ। ತಸ್ಮಾದ್ಯದ್ಯಪಿ ರಾಜಾ ಪರಮತಾಂ ಗಚ್ಛತಿ, ಬ್ರಹ್ಮೈವಾಂತತ ಉಪನಿಶ್ರಯತಿ ಸ್ವಾಂ ಯೋನಿಂ; ಯ ಉ ಏನಂ ಹಿನಸ್ತಿ, ಸ್ವಾಂ ಸ ಯೋನಿಮೃಚ್ಛತಿ, ಸ ಪಾಪೀಯಾನ್ ಭವತಿ ಯಥಾ ಶ್ರೇಯಾಂಸಂ ಹಿಂಸಿತ್ವಾ ॥೧೧॥**

ಅಗ್ರೇ– ಮೊದಲು ಇದಂ=ಇದು ಬ್ರಹ್ಮ ವೈ ಏಕಂ ಏವ ಆಸೀತ್=ಬ್ರಹ್ಮವೊಂದೇ ಆಗಿತ್ತು ; ತತ್=ಅದು ಏಕಂ ಸತ್=ಒಂದೇ ಆಗಿದ್ದು ನ ವ್ಯಭವತ್=ಸಮರ್ಥವಾಗಿರಲಿಲ್ಲ. ತತ್=ಅದು ಶ್ರೇಯೋರೂಪಂ=ಶ್ರೇಯೋರೂಪಿಯಾದ ಕ್ಷತ್ರಂ=ಕ್ಷತ್ರಿಯನನ್ನು ಅತ್ಯಸೃಜತ=ಸೃಷ್ಟಿಸಿತು; ಯಾನಿ ಯಾರು ದೇವತ್ರಾ=ದೇವತೆಗಳಲ್ಲಿ ಕ್ಷತ್ರಾಣಿ=ಕ್ಷತ್ರಿಯರೊ ಏತಾನಿ=ಇವರು—ಇಂದ್ರಃ=ಇಂದ್ರ ವರುಣಃ=ವರುಣ ಸೋಮಃ=ಸೋಮ ರುದ್ರಃ=ರುದ್ರ ಪರ್ಜನ್ಯಃ=ಪರ್ಜನ್ಯ ಯಮಃ=ಯಮ ಮೃತ್ಯುಃ=ಮೃತ್ಯು ಈಶಾನಃ–ಈಶಾನ ಇತಿ=ಎಂದು. ತಸ್ಮಾತ್=ಆದುದರಿಂದ ಕ್ಷತ್ರಾತ್=ಕ್ಷತ್ರಿಯನಿಗಿಂತ ಪರಂ=ಶ್ರೇಷ್ಠವಾದುದು ನ ಆಸ್ತಿ=ಇಲ್ಲ; ತಸ್ಮಾತ್=ಆದುದರಿಂದ ರಾಜಸೂಯೇ=ರಾಜಸೂಯಯಜ್ಞದಲ್ಲಿ ಬ್ರಾಹ್ಮಣಃ=ಬ್ರಾಹ್ಮಣನು ಕ್ಷತ್ರಿಯಂ=ಕ್ಷತ್ರಿಯನನ್ನು ಅಧಸ್ತಾತ್=ಕೆಳಗಿನ ಅಂತಸ್ತಿನಿಂದ ಉಪಾಸ್ತೇ=ಉಪಾಸಿಸುತ್ತಾನೆ; ತತ್ ಯಶಃ=ಆ ಯಶಸ್ಸನ್ನು ಕ್ಷತ್ರೇ ಏವ=ಕ್ಷತ್ರಿಯನಲ್ಲಿಯೇ ದಧಾತಿ=ಇಡುತ್ತಾನೆ. ಯತ್ ಬ್ರಹ್ಮ=ಯಾವನು ಬ್ರಾಹ್ಮಣನೋ ಸಾ ಏಷಾ=ಆ ಇವನು ಕ್ಷತ್ರಸ್ಯ=ಕ್ಷತ್ರಿಯನ ಯೋನಿಃ=ಯೋನಿಯು ತಸ್ಮಾತ್=ಆದುದರಿಂದ ರಾಜಾ=ರಾಜನು ಪರಮತಾಂ=ಶ್ರೇಷ್ಠತೆಯನ್ನು ಯದಿ ಅಪಿ ಗಚ್ಛತಿ=ಹೊಂದಿದರೂ, ಅಂತತಃ=ಕೊನೆಗೆ ಸ್ವಾಂ ಯೋನಿಂ=ತನ್ನ ಕಾರಣನಾದ ಬ್ರಹ್ಮ ಏವ=ಬ್ರಾಹ್ಮಣನನ್ನೇ ಉಪನಿಶ್ರಯತಿ=ಆಶ್ರಯಿಸುತ್ತಾನೆ ; ಯಃ ಉ=ಯಾವನು ಏನಂ=ಇವನನ್ನು ಹಿನಸ್ತಿ=ಕಡೆಗಣಿಸುತ್ತಾನೆಯೊ ಸಃ=ಅವನು ಸ್ವಾಂ ಯೋನಿಂ=ತನ್ನ ಯೋನಿಯನ್ನು ಋಚ್ಛತಿ=ನಾಶಮಾಡಿಕೊಳ್ಳುತ್ತಾನೆ ; ಸಃ=ಅವನು ಪಾಪೀಯಾನ್ ಭವತಿ=ಹೆಚ್ಚು ಪಾಪಿಯಾಗುತ್ತಾನೆ. ಯಥಾ=ಹೇಗೆ ಶ್ರೇಯಾಂಸಂ=ಶ್ರೇಷ್ಠನನ್ನು ಹಿಂಸಿತ್ವಾ=ಹಿಂಸಿಸಿ, ಕಡೆಗಣಿಸಿ.

೧೧, ಇದು[1] ಮೊದಲು ಬ್ರಹ್ಮವೊಂದೇ[2] ಆಗಿತ್ತು. ಅದು ಒಂದೇ ಆಗಿದ್ದುದರಿಂದ (ಕರ್ಮವನ್ನು ಮಾಡಲು)[3] ಸಮರ್ಥವಾಗಿರಲಿಲ್ಲ. ಅದು

ಶ್ರೇಯೋರೂಪಿಯಾದ ಕ್ಷತ್ರಿಯನನ್ನು ಸೃಷ್ಟಿಸಿತು ; ದೇವತೆಗಳಲ್ಲಿ ಕ್ಷತ್ರಿಯ ರಾದವರು ಇವರು : ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶಾನ. ಆದುದರಿಂದ ಕ್ಷತ್ರಿಯನಿಗಿಂತ ಶ್ರೇಷ್ಠವಾದುದು ಇಲ್ಲ. ಆದುದರಿಂದ ರಾಜಸೂಯಯಜ್ಞದಲ್ಲಿ ಬ್ರಾಹ್ಮಣನು ಕ್ಷತ್ರಿಯನನ್ನು ಕೆಳಗಿನ ಅಂತಸ್ತಿನಿಂದ ಉಪಾಸಿಸುತ್ತಾನೆ.[4] ಆ ಯಶಸ್ಸನ್ನು ಬ್ರಾಹ್ಮಣನು ಕ್ಷತ್ರಿಯ ನಿಗೆ ಕೊಟ್ಟನು. ಬ್ರಾಹ್ಮಣನು ಕ್ಷತ್ರಿಯನ ಯೋನಿ. ಆದುದರಿಂದ ಕ್ಷತ್ರಿ ಯನು (ಯಜ್ಞದಲ್ಲಿ) ಶ್ರೇಷ್ಠತೆಯನ್ನು ಹೊಂದಿದರೂ ಕೊನೆಗೆ ತನ್ನ ಕಾರಣನಾದ ಬ್ರಾಹ್ಮಣನನ್ನೇ ಆಶ್ರಯಿಸುತ್ತಾನೆ[5] ಯಾವನು ಬ್ರಾಹ್ಮಣ ನನ್ನು ಕಡೆಗಣಿಸುತ್ತಾನೆಯೊ ಅವನು ತನ್ನ ಮೂಲವನ್ನು ನಾಶಮಾಡಿ ಕೊಳ್ಳುತ್ತಾನೆ. ಶ್ರೇಷ್ಠನನ್ನು ಕಡೆಗಣಿಸಿದರೆ ಹೇಗೊ ಹಾಗೆ ಅವನು ಹೆಚ್ಚು ಪಾಪಿಯಾಗುತ್ತಾನೆ.

[[1] ಕ್ಷತ್ರಿಯಾದಿ ಸಮೂಹವು.

[2] ಅಗ್ನಿಯನ್ನು ಸೃಷ್ಟಿಸಿ ಅಗ್ನಿರೂಪವನ್ನು ಪಡೆದ ವಿರಾಟ್‌ಪುರುಷ ಅಥವಾ ಹಿರಣ್ಯಗರ್ಭ. ಬ್ರಾಹ್ಮಣಜಾತಿಯ ಅಭಿಮಾನದಿಂದ ಬ್ರಹ್ಮವೆಂದು ಕರೆದಿದೆ.

[3] ಬ್ರಾಹ್ಮಣಜಾತಿನಿಮಿತ್ತವಾದ ಕರ್ಮವನ್ನು ಮಾಡಲು.

[4] ರಾಜಸೂಯಾಭಿಷಿಕ್ತನಾಗಿ ಕುರ್ಚಿಯಲ್ಲಿ ಕುಳಿತಿರುವ ರಾಜನು ಋತ್ವಿಕ್ಕನನ್ನು ಕುರಿತು 'ಬ್ರಹ್ಮನ್' ಎಂದು ಕರೆದಾಗ, ಅವನು ರಾಜನನ್ನು ಕುರಿತು 'ರಾಜನೆ, ನೀನು ಬ್ರಹ್ಮವಾಗಿರುವೆ' ಎಂದು ಪ್ರತ್ಯುತ್ತರವನ್ನು ಕೊಡುತ್ತಾನೆ.

[5] ಪುರೋಹಿತನನ್ನೇ ಮುಂದಿಟ್ಟುಕೊಳ್ಳುತ್ತಾನೆ.]

**ಸ ನೈವ ವ್ಯಭವತ್, ಸ ವಿಶಮಸೃಜತ, ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ—ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ || ೧೨ ||**

ಸಃ—ಅವನು ನ ಏವ ವ್ಯಭವತ್ ; ಸಃ—ಅವನು ವಿಶಂ—ವೈಶ್ಯನನ್ನು ಅಸೃಜತ— ಸೃಷ್ಟಿಸಿದನು. ಯಾನಿ—ಯಾರು ಗಣಶಃ—ಗಣಗಳಾಗಿ ಆಖ್ಯಾಯಂತೇ—ವರ್ಣಿಸಲ್ಪಟ್ಟಿ ದ್ದಾರೆಯೊ ಏತಾನಿ ದೇವಜಾತಾನಿ—ಈ ದೇವಜಾತಿಗಳು—ವಸವಃ—ವಸುಗಳು ರುದ್ರಾಃ—ರುದ್ರರು ಆದಿತ್ಯಾಃ—ಆದಿತ್ಯರು ವಿಶ್ವೇ ದೇವಾಃ—ವಿಶ್ವೇ ದೇವತೆಗಳು ಮರುತಃ—ಮರುತ್ತುಗಳು ಇತಿ—ಎಂದು.

೧೨. ಅವನು[1] ಇನ್ನೂ[2] ಸಮರ್ಥನಾಗಲಿಲ್ಲ.[3] ಅವನು ವೈಶ್ಯಜಾತಿಯನ್ನು ಸೃಷ್ಟಿಸಿದನು;[4] ಗಣಗಳಾಗಿ ವರ್ಣಿಸಲ್ಪಟ್ಟಿರುವ ದೇವಜಾತಿಗಳು ಇವು : ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ಹದಿಮೂರು ವಿಶ್ವೇದೇವತೆಗಳು ಮತ್ತು ನಲ್ವತ್ತೊಂಬತ್ತು ಮರುತ್ತುಗಳು.

[[1] ವಿರಾಟ್‌ಪುರುಷನು.
[2] ಕ್ಷತ್ರಿಯರನ್ನು ಸೃಷ್ಟಿಸಿದ ಮೇಲೂ.
[3] ವಿತ್ತವನ್ನು ಸಂಪಾದಿಸುವವನು ಇಲ್ಲದುದರಿಂದ ಕರ್ಮಕ್ಷಮನಾಗಿರಲಿಲ್ಲ.
[4] ಕರ್ಮಸಾಧನವಾದ ವಿತ್ತವನ್ನು ಸಂಪಾದಿಸುವುದಕ್ಕೆ.]

**ಸ ನೈವ ವ್ಯಭವತ್, ಸ ಶೌದ್ರಂ ವರ್ಣಮಸೃಜತ ಪೂಷಣಮ್; ಇಯಂ ವೈ ಪೂಷಾ, ಇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ || ೧೩ ||**

ಸಃ ನ ಏವ ವ್ಯಭವತ್; ಸಃ=ಅವನು ಶೌದ್ರಂ ವರ್ಣಂ=ಶೂದ್ರವರ್ಣವನ್ನು [ಅರ್ಥಾತ್] ಪೂಷಣಂ=ಪೂಷನನ್ನು ಅಸೃಜತ=ಸೃಷ್ಟಿಸಿದನು; ಇಯಂ ವೈ=ಈ [ಪೃಥ್ವಿಯೇ] ಪೂಷಾ=ಪೂಷನ್; ಇಯಂ=ಇದು ಹಿ=ಏಕೆಂದರೆ ಯತ್ ಕಿಂಚ ಇದಂ=ಏನಿದೆಯೊ ಇದಂ ಸರ್ವಂ=ಇದೆಲ್ಲವನ್ನೂ ಪುಷ್ಯತಿ=ಪೋಷಿಸುತ್ತದೆ.

೧೩. ಅವನು ಇನ್ನೂ[1]—ಸಮರ್ಥನಾಗಲಿಲ್ಲ. ಅವನು ಶೂದ್ರಜಾತಿಯನ್ನು ಎಂದರೆ ಪೂಷನನ್ನು ಸೃಷ್ಟಿಸಿದನು. ಈ ಪೃಥ್ವಿಯೇ ಪೂಷನ್[2] ಏಕೆಂದರೆ ಏನೇನಿದೆಯೊ ಇದೆಲ್ಲವನ್ನೂ ಇದು ಪೋಷಿಸುತ್ತದೆ.

[[1] ಪರಿಚಾರಕರು ಇಲ್ಲದುದರಿಂದ.
[2] ಎಲ್ಲವನ್ನೂ ಪೋಷಿಸುವುದರಿಂದ ಪೂಷನ್.]

**ಸ ನೈವ ವ್ಯಭವತ್, ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ; ತದೇತತ್ ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಃ, ತಸ್ಮಾದ್ಧರ್ಮಾತ್ ಪರಂ ನಾಸ್ತಿ; ಅಥೋ ಅಬಲೀಯಾನ್ ಬಲೀಯಾಂಸಮಾಶಂಸತೇ ಧರ್ಮೇಣ, ಯಥಾ ರಾಜ್ಞೈವಂ; ಯೋ ವೈ ಸ ಧರ್ಮಃ ಸತ್ಯಂ ವೈ ತತ್, ತಸ್ಮಾತ್ ಸತ್ಯಂ ವದಂತಮಾಹುಃ, ಧರ್ಮಂ ವದತೀತಿ, ಧರ್ಮಂ ವಾ ವದಂತಂ ಸತ್ಯಂ ವದತೀತಿ, ಏತದ್ಧ್ಯೇವೈತದುಭಯಂ ಭವತಿ || ೧೪ ||**

ಸಃ ನ ಏವ ವ್ಯಭವತ್ ; ತತ್ ಶ್ರೇಯೋರೂಪಂ=ಆ ಶ್ರೇಯೋರೂಪವನ್ನು ಧರ್ಮಂ=ಧರ್ಮವನ್ನು ಅತ್ಯಸೃಜತ=ಸೃಷ್ಟಿಸಿದನು ; ಯತ್ [ಯಃ] ಧರ್ಮಃ=ಯಾವ ಧರ್ಮವಿದೆಯೊ ತತ್ ಏತತ್=ಆ ಇದು ಕ್ಷತ್ರಸ್ಯ=ಕ್ಷತ್ರಿಯನ ಕ್ಷತ್ರಂ=ನಿಯಂತೃವು, ತಸ್ಮಾತ್=ಆದುದರಿಂದ ಧರ್ಮಾತ್=ಧರ್ಮಕ್ಕಿಂತ ಪರಂ=ಶ್ರೇಷ್ಠವಾದುದು ನ ಅಸ್ತಿ=ಇಲ್ಲ; ಅಬಲೀಯಾನ್=ದುರ್ಬಲನಾದವನು ಅಥೋ [ಅಪಿ]=ಕೂಡ ಬಲೀಯಾಂಸಂ=ಬಲಶಾಲಿಯಾದವನನ್ನು ಧರ್ಮೇಣ=ಧರ್ಮದಿಂದ [ಜೇತುಂ] ಆಶಂಸತೇ=[ಜಯಿಸಲು] ಬಯಸುತ್ತಾನೆ, ಯಥಾ ರಾಜ್ಞಾ ಏವಂ=ರಾಜನಿಂದ ಹೇಗೊ ಹಾಗೆ; ಯಃ ವೈ ಸಃ ಧರ್ಮಃ=ಯಾವುದು ಆ ಧರ್ಮವೊ ತತ್ ಸತ್ಯಂ ವೈ=ಅದು ಸತ್ಯವೇ, ತಸ್ಮಾತ್=ಆದುದರಿಂದ ಸತ್ಯಂ ವದಂತಂ=ಸತ್ಯವಾದಿಯನ್ನು ಧರ್ಮಂ ವದತಿ=ಧರ್ಮವನ್ನು ಹೇಳುತ್ತಾನೆ ಇತಿ=ಎಂದು ಆಹುಃ=[ಹೇಳುತ್ತಾರೆ]; ಹಿ=ಏಕೆಂದರೆ ಏತತ್ ಉಭಯಂ=ಈ ಉಭಯವೂ ಏತತ್ [ಧರ್ಮಃ] ಏವ ಭವತಿ=ಧರ್ಮವೇ ಆಗಿರುತ್ತದೆ.

೧೪. ಅವನು ಇನ್ನೂ ಸಮರ್ಥನಾಗಲಿಲ್ಲ[1] ಅವನು ಶ್ರೇಯೋರೂಪವಾದ ಧರ್ಮವನ್ನು ಸೃಷ್ಟಿಸಿದನು. ಈ ಧರ್ಮವು ಕ್ಷತ್ರಿಯನ ನಿಯಂತೃವಾಗಿದೆ. ಆದುದರಿಂದ ಧರ್ಮಕ್ಕಿಂತ ಶ್ರೇಷ್ಠವಾದುದು ಇಲ್ಲ.[2] (ಆದುದರಿಂದ) ದುರ್ಬಲನಾದವನೂ ಕೂಡ ರಾಜನ ಮೂಲಕ ಹೇಗೊ ಹಾಗೆ ಧರ್ಮದಿಂದ (ಜಯಿಸಲು) ಬಯಸುತ್ತಾನೆ. ಆ ಧರ್ಮವೇ ಸತ್ಯ.[3] ಆದುದರಿಂದ ಸತ್ಯವಾದಿಯ ವಿಷಯದಲ್ಲಿ 'ಇವನು ಧರ್ಮವನ್ನು ನುಡಿಯುತ್ತಾನೆ' ಎಂದು ಹೇಳುತ್ತಾರೆ; ಅಥವಾ ಧರ್ಮವಾದಿಯ ವಿಷಯದಲ್ಲಿ 'ಇವನು ಸತ್ಯವನ್ನು ನುಡಿಯುತ್ತಾನೆ' ಎಂದು (ಹೇಳುತ್ತಾರೆ) ; ಏಕೆಂದರೆ ಇವೆರಡೂ ಧರ್ಮವಾಗಿರುತ್ತವೆ.

[[1] ಕ್ಷತ್ರಿಯರು ಉಗ್ರರಾಗಿರುವುದರಿಂದ ಸ್ವಚ್ಛಂದರಾಗುವರೆಂಬ ಶಂಕೆಯಿಂದ.
[2] ಅದು ಎಲ್ಲವನ್ನೂ ನಿಯಂತ್ರಿಸುವುದರಿಂದ.
[3] ಲೌಕಿಕರು ವ್ಯವಹರಿಸುತ್ತಿರುವ ಧರ್ಮವೇ ಸತ್ಯವು: ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ವಸ್ತುವನ್ನು ಅರಿತುಕೊಳ್ಳುವುದು ಸತ್ಯ. ಅದನ್ನೇ ಅನುಷ್ಠಾನ ಮಾಡಿದರೆ ಧರ್ಮವೆನಿಸುವುದು, ಶಾಸ್ತ್ರಾರ್ಥದ ಪ್ರಕಾರ ಅರಿತುಕೊಂಡರೆ ಸತ್ಯವಾಗುವುದು. ಶಾಸ್ತ್ರಾರ್ಥವನ್ನು ಅನುಷ್ಠಾನದಿಂದ ನಿರ್ಣಯಿಸುತ್ತಾರೆ, ಅನುಷ್ಠಾನವನ್ನು ಶಾಸ್ತ್ರಾರ್ಥದಿಂದ ನಿಶ್ಚಯಿಸುತ್ತಾರೆ; ಹೀಗೆ ಸತ್ಯಧರ್ಮಗಳು ಒಂದನ್ನೊಂದು ಅವಲಂಬಿಸಿರುತ್ತವೆ.]

ತದೇತದ್ಬ್ರಹ್ಮ ಕ್ಷತ್ರಂ ವಿಟ್ ಶೂದ್ರಃ; ತದಗ್ನಿನೈವ ದೇವೇಷು ಬ್ರಹ್ಮಾಭವತ್, ಬ್ರಾಹ್ಮಣೋ ಮನುಷ್ಯೇಷು, ಕ್ಷತ್ರಿಯೇಣ ಕ್ಷತ್ರಿಯೋ, ವೈಶ್ಯೇನ ವೈಶ್ಯಃ, ಶೂದ್ರೇಣ ಶೂದ್ರಃ; ತಸ್ಮಾದಗ್ನಾವೇವ ದೇವೇಷು ಲೋಕಮಿಚ್ಛಂತೇ, ಬ್ರಾಹ್ಮಣೇ ಮನುಷ್ಯೇಷು, ಏತಾಭ್ಯಾಂ ಹಿ ರೂಪಾಭ್ಯಾಂ ಬ್ರಹ್ಮಾಭವತ್ । ಅಥ ಯೋ ಹ ವಾ ಅಸ್ಮಾಲ್ಲೋಕಾತ್ ಸ್ವಂ ಲೋಕಮದೃಷ್ಟ್ವಾ ಪ್ರೈತಿ, ಸ ಏನಮವಿದಿತೋ ನ ಭುನಕ್ತಿ, ಯಥಾ ವೇದೋ ವಾನನುಕ್ತಃ ಅನ್ಯದ್ವಾ ಕರ್ಮಾಕೃತಂ; ಯದಿಹ ವಾ ಅಪ್ಯನೇವಂವಿನ್ಮಹತ್ಪುಣ್ಯಂ ಕರ್ಮ ಕರೋತಿ, ತದ್ಧಾಸ್ಯಾಂತತಃ ಕ್ಷೀಯತ ಏವ; ಆತ್ಮಾನಮೇವ ಲೋಕಮುಪಾಸೀತ; ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ । ಅಸ್ಮಾದ್ಧ್ಯೇವಾತ್ಮನೋ ಯದ್ಯತ್ ಕಾಮಯತೇ ತತ್ತತ್ ಸೃಜತೇ ॥ ೧೫ ॥

ತತ್ ಏತತ್=ಆ ಈ [ಚಾತುರ್ವರ್ಣ್ಯಂ ಸೃಷ್ಟಂ=ಚಾತುರ್ವರ್ಣ್ಯವು ಸೃಷ್ಟಿಸಲ್ಪಟ್ಟಿತು]—ಬ್ರಹ್ಮ=ಬ್ರಾಹ್ಮಣ ಕ್ಷತ್ರಂ=ಕ್ಷತ್ರಿಯ ವಿಟ್=ವೈಶ್ಯ ಶೂದ್ರಃ=ಶೂದ್ರ; ತತ್=ಅದು ಅಗ್ನಿನಾ ಏವ=ಅಗ್ನಿರೂಪದಿಂದಲೇ ದೇವೇಷು=ದೇವತೆಗಳಲ್ಲಿ ಬ್ರಹ್ಮ ಅಭವತ್=ಬ್ರಾಹ್ಮಣವಾಯಿತು, ಮನುಷ್ಯೇಷು=ಮನುಷ್ಯರಲ್ಲಿ ಬ್ರಾಹ್ಮಣಃ=ಬ್ರಾಹ್ಮಣನು, ಕ್ಷತ್ರಿಯೇಣ=ಕ್ಷತ್ರಿಯನಿಂದ ಕ್ಷತ್ರಿಯಃ=ಕ್ಷತ್ರಿಯನೂ, ವೈಶ್ಯೇನ=ವೈಶ್ಯನಿಂದ ವೈಶ್ಯಃ=ವೈಶ್ಯನೂ, ಶೂದ್ರೇಣ=ಶೂದ್ರನಿಂದ ಶೂದ್ರಃ=ಶೂದ್ರನೂ [ಆಯಿತು]; ತಸ್ಮಾತ್=ಆದುದರಿಂದ ದೇವೇಷು=ದೇವತೆಗಳಲ್ಲಿ ಅಗ್ನೌ ಏವ=ಅಗ್ನಿಯಿಂದಲೇ, ಮನುಷ್ಯೇಷು=ಮನುಷ್ಯರಲ್ಲಿ ಬ್ರಾಹ್ಮಣೇ=ಬ್ರಾಹ್ಮಣನಾಗಿಯೂ ಲೋಕಂ=ಲೋಕವನ್ನು ಇಚ್ಛಂತೇ=ಬಯಸುತ್ತಾರೆ; ಹಿ=ಏಕೆಂದರೆ ಬ್ರಹ್ಮ=ಬ್ರಹ್ಮವು ಏತಾಭ್ಯಾಂ ರೂಪಾಭ್ಯಾಂ ಅಭವತ್=ಈ ಎರಡು ರೂಪಗಳಾಯಿತು. ಅಥ=ಇನ್ನು ಯಃ ಹ ವೈ=ಯಾವನೇ ಸ್ವಂ ಲೋಕಂ=ತನ್ನ ಲೋಕವನ್ನು ಅದೃಷ್ಟ್ವಾ=ನೋಡದೆ ಅಸ್ಮಾತ್ ಲೋಕಾತ್=ಈ ಲೋಕದಿಂದ ಪ್ರೈತಿ=ಹೋಗುವನೊ ಸಃ=ಅದು ಅವಿದಿತಃ=ಅಜ್ಞಾತವಾದುದರಿಂದ ಏನಂ=ಇವನನ್ನು ನ ಭುನಕ್ತಿ=ಕಾಪಾಡುವುದಿಲ್ಲ. ಯಥಾ=ಹೇಗೆ ಅನನುಕ್ತಃ=ಅನಧೀತವಾದ ವೇದಃ=ವೇದವು ವಾ=ಅಥವಾ ಅಕೃತಂ=ಮಾಡಲ್ಪಡದ ಅನ್ಯತ್ ಕರ್ಮ ವಾ=ಬೇರೆ ಕರ್ಮ; ಅನೇವಂವಿತ್=ಹೀಗೆ ಅರಿಯದವನು ಇಹ=ಇಲ್ಲಿ ಮಹತ್ ಪುಣ್ಯಂ ಕರ್ಮ ಅಪಿ=ಮಹತ್ ಪುಣ್ಯಕರ್ಮವನ್ನೂ ಕೂಡ ಯತ್ ಕರೋತಿ=ಮಾಡಿದ್ದರೂ ಅಸ್ಯ=ಅವನ

ತತ್ ಹ=ಅದು, ಕರ್ಮ ಅಂತತಃ=ಕೊನೆಯಲ್ಲಿ ಕ್ಷೀಯತೇ ಏವ=ಕ್ಷಯವೇ ಆಗುತ್ತದೆ. ಆತ್ಮಾನಂ ಲೋಕಂ ಏವ=ಆತ್ಮನೆಂಬ ಲೋಕವನ್ನೇ ಉಪಾಸೀತ=ಉಪಾಸಿಸಬೇಕು. ಸಃ ಯಃ=ಆ ಯಾವನು ಆತ್ಮಾನಂ ಲೋಕಂ ಏವ=ಆತ್ಮನೆಂಬ ಲೋಕವನ್ನೇ ಉಪಾಸ್ತೇ=ಉಪಾಸಿಸುತ್ತಾನೆಯೊ ಅಸ್ಯ=ಅವನ ಕರ್ಮ=ಕರ್ಮವು ನ ಹ ಕ್ಷೀಯತೇ-ಕ್ಷಯವೇ ಆಗುವುದಿಲ್ಲ. ಹಿ=ಏಕೆಂದರೆ ಯತ್ ಯತ್=ಯಾವ ಯಾವುದನ್ನು ಕಾಮಯತೇ=ಬಯಸುತ್ತಾನೆಯೊ ತತ್ ತತ್-ಅದದನ್ನು ಅಸ್ಮಾತ್ ಆತ್ಮನಃ ಏವ=ಈ ಆತ್ಮನಿಂದಲೇ ಸೃಜತೇ=ಸೃಷ್ಟಿಸಿಕೊಳ್ಳುತ್ತಾನೆ.

೧೫. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಈ ನಾಲ್ಕು ವರ್ಣಗಳು ಸೃಷ್ಟಿಸಲ್ಪಟ್ಟುವು. ಅವನು ಅಗ್ನಿರೂಪದಿಂದಲೇ ದೇವತೆಗಳಲ್ಲಿ ಬ್ರಾಹ್ಮಣನಾದನು; ಮತ್ತು ಮನುಷ್ಯರಲ್ಲಿ ಬ್ರಾಹ್ಮಣನಾದನು. (ಅವನು) ಕ್ಷತ್ರಿಯರ ಮೂಲಕ ಕ್ಷತ್ರಿಯನೂ, ವೈಶ್ಯರ ಮೂಲಕ ವೈಶ್ಯನೂ, ಶೂದ್ರರ ಮೂಲಕ ಶೂದ್ರನೂ (ಆದನು). ಆದುದರಿಂದ (ಮನುಷ್ಯರು) ದೇವತೆಗಳಲ್ಲಿ ಅಗ್ನಿಯಿಂದಲೇ ಲೋಕವನ್ನು ಬಯಸುತ್ತಾರೆ;[1] ಮತ್ತು ಮನುಷ್ಯರಲ್ಲಿ ಬ್ರಾಹ್ಮಣನಾಗಿಯೂ ಲೋಕವನ್ನು ಬಯಸುತ್ತಾರೆ;[2] ಏಕೆಂದರೆ ಬ್ರಹ್ಮವು ಈ ಎರಡು ರೂಪಗಳಾಯಿತು. ಇನ್ನು ಯಾವನೇ ತನ್ನ ಲೋಕವನ್ನು ನೋಡದೆ[3] ಈ ಲೋಕದಿಂದ[4] ಹೋಗುವನೊ, ಅದು ಅಜ್ಞಾತವಾದುದರಿಂದ ಇವನನ್ನು ಕಾಪಾಡುವುದಿಲ್ಲ;[5] ಅನಧೀತವಾದ ವೇದ ಅಥವಾ ಮಾಡಲ್ಪಡದ ಬೇರೆ ಕರ್ಮ ಇವು ಹೇಗೊ ಹಾಗೆ. ಹೀಗೆ ಅರಿಯದವನು ಇಲ್ಲಿ ಮಹತ್ ಪುಣ್ಯಕರ್ಮವನ್ನು ಮಾಡಿದ್ದರೂ ಅವನ ಆ ಕರ್ಮವು ಕೊನೆಯಲ್ಲಿ ಕ್ಷಯವೇ ಆಗುತ್ತದೆ. ಆತ್ಮನೆಂಬ ಲೋಕವನ್ನೇ ಉಪಾಸಿಸಬೇಕು. ಯಾವನು ಆತ್ಮಲೋಕವನ್ನೇ ಉಪಾಸಿಸುತ್ತಾನೆಯೊ ಅವನ ಕರ್ಮವು ಕ್ಷಯವೇ ಆಗುವುದಿಲ್ಲ.[6] ಏಕೆಂದರೆ ಅವನು ಯಾವಯಾವುದನ್ನು ಬಯಸುತ್ತಾನೆಯೊ ಅದದನ್ನು ಈ ಆತ್ಮನಿಂದಲೇ ಸೃಷ್ಟಿಸಿಕೊಳ್ಳುತ್ತಾನೆ.

[ [1] ಅಗ್ನಿಯಲ್ಲಿ ಕರ್ಮವನ್ನು ಮಾಡಿ ಅದರ ಫಲವನ್ನು ಬಯಸುತ್ತಾರೆ.

[2] ಬ್ರಾಹ್ಮಣತ್ವದಿಂದಲೇ ಕರ್ಮಫಲವನ್ನು ಪಡೆಯಲು ಬಯಸುತ್ತಾರೆ.

[3] ಆತ್ಮತ್ವವನ್ನು ಎಂದಿಗೂ ಬಿಡದ ಆತ್ಮನೆಂಬ ಹೆಸರುಳ್ಳ ಸ್ವಲೋಕವನ್ನು ಅಹಂ ಬ್ರಹ್ಮಾಸ್ಮಿ ಎಂದು ಅರಿತುಕೊಳ್ಳದೆ.

[4] ತನಗೆ ಅಸ್ವಾಭಾವಿಕವಾದ ಈ ಲೋಕದಿಂದ.

[5] ನಿತ್ಯಾತ್ಮಸ್ವರೂಪದಿಂದ ಅಭಿವ್ಯಕ್ತವಾಗದೆ ಇದ್ದರೆ ಅವಿದ್ಯಾದಿಗಳನ್ನು ನಾಶಪಡಿಸಿ ಕಾಪಾಡುವುದಿಲ್ಲ.

[6] ಹೇಗೆ ಅಜ್ಞಾನಿಗೆ ಕರ್ಮಕ್ಷಯಲಕ್ಷಣವಾದ ಸಂಸಾರದುಃಖವು ಸಂತತವೊ ಹಾಗೆ ಅದು ಆತ್ಮಜ್ಞಾನಿಗೆ ಇರುವುದಿಲ್ಲ.]

**ಅಥೋ ಅಯಂ ವಾ ಆತ್ಮಾ ಸರ್ವೇಷಾಂ ಭೂತಾನಾಂ ಲೋಕಃ; ಸ ಯಜ್ಜುಹೋತಿ, ಯದ್ಯಜತೇ, ತೇನ ದೇವಾನಾಂ ಲೋಕಃ, ಅಥ ಯದನುಬ್ರೂತೇ ತೇನ ಋಷೀಣಾಮ್, ಅಥ ಯತ್ಪಿತೃಭ್ಯೋ ನಿಪೃಣಾತಿ, ಯತ್ಪ್ರಜಾಮಿಚ್ಛತೇ, ತೇನ ಪಿತೄಣಾಮ್; ಅಥ ಯನ್ಮನುಷ್ಯಾನ್ ವಾಸಯತೇ, ಯದೇಭ್ಯೋಽಶನಂ ದದಾತಿ, ತೇನ ಮನುಷ್ಯಾಣಾಮ್; ಅಥ ಯತ್ಪಶುಭ್ಯಸ್ತೃಣೋದಕಂ ವಿಂದತಿ, ತೇನ ಪಶೂನಾಂ; ಯದಸ್ಯ ಗೃಹೇಷು ಶ್ವಾಪದಾ ವಯಾಂಸ್ಯಾ ಪಿಪೀಲಿಕಾಭ್ಯ ಉಪಜೀವಂತಿ, ತೇನ ತೇಷಾಂ ಲೋಕಃ, ಯಥಾ ಹ ವೈ ಸ್ವಾಯ ಲೋಕಾಯಾರಿಷ್ಟಿಮಿಚ್ಛೇತ್, ಏವಂ ಹೈವಂವಿದೇ ಸರ್ವಾಣಿ ಭೂತಾನ್ಯರಿಷ್ಟಿಮಿಚ್ಛಂತಿ; ತದ್ವಾ ಏತದ್ವಿದಿತಂ ಮೀಮಾಂಸಿತಮ್ ॥ ೧೬ ॥**

ಅಥೋ=ಇನ್ನು ಅಯಂ ಆತ್ಮಾ ವೈ=ಈ ಆತ್ಮನೇ ಸರ್ವೇಷಾಂ ಭೂತಾನಾಂ=ಎಲ್ಲ ಪ್ರಾಣಿಗಳಿಗೂ ಲೋಕಃ-ಭೋಗ್ಯನು. ಸಃ=ಅವನು ಯತ್ ಜುಹೋತಿ=ಯಾವ ಹೋಮಮಾಡುವನೊ, ಯತ್ ಯಜತೇ=ಯಾವ ಯಾಗ ಮಾಡುವನೊ ತೇನ=ಅದರಿಂದ ದೇವಾನಾಂ=ದೇವತೆಗಳಿಗೆ ಲೋಕಃ=ಭೋಗ್ಯನಾಗುತ್ತಾನೆ. ಅಥ=ಈಗ ಯತ್ ಅನುಬ್ರೂತೇ=ಯಾವ ಅಧ್ಯಯನವನ್ನು ಮಾಡುವನೊ ತೇನ ಋಷೀಣಾಂ=ಅದರಿಂದ ಋಷಿಗಳಿಗೆ [ಭೋಗ್ಯನು], ಅಥ=ಇನ್ನು ಯತ್ ಪಿತೃಭ್ಯಃ ನಿಪೃಣತಿ=ಪಿತೃಗಳಿಗೆ ಯಾವ ಪಿಂಡೋದಕಾದಿಗಳನ್ನು ಕೊಡುವನೊ, ಯತ್ ಪ್ರಜಾಂ ಇಚ್ಛತೇ=ಸಂತಾನೋತ್ಪತ್ತಿಗೆ ಯಾವ ಪ್ರಯತ್ನವನ್ನು ಮಾಡುವನೊ ತೇನ ಪಿತೃಣಾಂ=ಅದರಿಂದ ಪಿತೃಗಳಿಗೆ [ಭೋಗ್ಯನು], ಅಥ=ಇನ್ನು ಯತ್ ಮನುಷ್ಯಾನ್ ವಾಸಯತೇ=ಮನುಷ್ಯರಿಗೆ ಯಾವ ವಾಸವನ್ನು ಕೊಡುವನೊ, ಯತ್ ಏಭ್ಯಃ ಅಶನಂ ದದಾತಿ=ಅವರಿಗೆ ಯಾವ ಅನ್ನವನ್ನು ಕೊಡುವನೊ ತೇನ ಮನುಷ್ಯಾಣಾಂ=ಅದರಿಂದ ಮನುಷ್ಯರಿಗೆ [ಭೋಗ್ಯನು], ಅಥ=ಇನ್ನು ಯತ್ ಪಶುಭ್ಯಃ ತೃಣೋದಕಂ ವಿಂದತಿ-ಪಶುಗಳಿಗೆ ಯಾವ ತೃಣೋದಕವನ್ನು ಕೊಡುವನೊ ತೇನ ಪಶೂನಾಂ=ಅದರಿಂದ ಪಶುಗಳಿಗೆ [ಭೋಗ್ಯನು]; ಯತ್=ಯಾವ ಅಸ್ಯ ಗೃಹೇಷು=ಅವರ ಮನೆಗಳಲ್ಲಿ ಶ್ವಾಪದಾಃ=ಮೃಗಗಳು ವಯಾಂಸಿ=ಪಕ್ಷಿಗಳು ಆ ಪಿಪೀಲಿಕಾಭ್ಯಃ=ಇರುವೆಗಳವರೆಗೂ ಉಪಜೀವಂತಿ=ಜೀವಿಸುವುವೊ ತೇನ=ಅದರಿಂದ ತೇಷಾಂ ಲೋಕಃ ಅವುಗಳಿಗೆ

ಭೋಗ್ಯನು ; ಯಥಾ ಹ ವೈ=ಹೇಗೆ ಸ್ವಾಯ ಲೋಕಾಯ=ತನ್ನ ಶರೀರಕ್ಕೆ ಅರಿಷ್ಟಿಂ= ಅವಿನಾಶವನ್ನು, ಕ್ಷೇಮವನ್ನು ಇಚ್ಛೇತ್=ಬಯಸುವನೊ, ಏವಂ ಹ=ಹಾಗೆಯೇ ಸರ್ವಾಣಿ ಭೂತಾನಿ=ಎಲ್ಲ ಪ್ರಾಣಿಗಳೂ ಏವಂವಿದೇ=ಹೀಗೆ ಅರಿತಿರುವವನಿಗೆ ಅರಿಷ್ಟಿಂ ಇಚ್ಛಂತಿ=ಕ್ಷೇಮವನ್ನು ಬಯಸುತ್ತವೆ ; ತತ್ ಏತತ್ ವೈ=ಆ ಇದೇ ವಿದಿತಂ=ತಿಳಿಯಲ್ಪಟ್ಟಿದೆ, ಮೀಮಾಂಸಿತಂ=ವಿಚಾರಿಸಲ್ಪಟ್ಟಿದೆ.

೧೬ ಇನ್ನು ಈ ಆತ್ಮನೇ (ಗೃಹಸ್ಥನೇ) ಎಲ್ಲ ಪ್ರಾಣಿಗಳಿಗೂ ಭೋಗ್ಯನು. ಅವನು (ಅಗ್ನಿಯಲ್ಲಿ) ಹೋಮಮಾಡುವುದರಿಂದ, ಯಾಗ ಮಾಡುವುದರಿಂದ[1] ದೇವತೆಗಳಿಗೆ ಭೋಗ್ಯನಾಗುತ್ತಾನೆ. ಅವನು ವೇದಾಧ್ಯಯನವನ್ನು ಮಾಡುವುದರಿಂದ ಋಷಿಗಳಿಗೆ (ಭೋಗ್ಯನಾಗುತ್ತಾನೆ). ಅವನು ಪಿತೃಗಳಿಗೆ ಪಿಂಡೋದಕಗಳನ್ನು ಕೊಡುವುದರಿಂದ, ಸಂತಾನೋತ್ಪತ್ತಿಗೆ ಪ್ರಯತ್ನವನ್ನು ಮಾಡುವುದರಿಂದ ಪಿತೃಗಳಿಗೆ (ಭೋಗ್ಯನಾಗುತ್ತಾನೆ). ಅವನು ಮನುಷ್ಯರಿಗೆ ವಾಸ, ಅನ್ನ ಇವುಗಳನ್ನು ನೀಡುವುದರಿಂದ ಅವರಿಗೆ (ಭೋಗ್ಯನಾಗುತ್ತಾನೆ). ಅವನು ಪಶುಗಳಿಗೆ ತೃಣೋದಕವನ್ನು ಕೊಡುವುದರಿಂದ ಅವುಗಳಿಗೆ (ಭೋಗ್ಯನಾಗುತ್ತಾನೆ). ಅವನ ಮನೆಯಲ್ಲಿ ಮೃಗಗಳು ಇರುವೆ ಪಕ್ಷಿಗಳು ಕೂಡ ಉಪಜೀವಿಸುವುದರಿಂದ ಅವನು ಇವುಗಳಿಗೆ ಭೋಗ್ಯನಾಗುತ್ತಾನೆ. (ಮನುಷ್ಯನು) ತನ್ನ ಶರೀರಕ್ಕೆ ಕ್ಷೇಮವನ್ನು ಹೇಗೆ ಬಯಸುವನೊ ಹಾಗೆಯೇ ಎಲ್ಲ ಪ್ರಾಣಿಗಳೂ ಹೀಗೆ ಅರಿತಿರುವವನಿಗೆ ಕ್ಷೇಮವನ್ನು ಇಚ್ಛಿಸುತ್ತದೆ. ಇದೇ ತಿಳಿಯಲ್ಪಟ್ಟಿದೆ,[2] ವಿಚಾರಿಸಲ್ಪಟ್ಟಿದೆ.[3]

[ವರ್ಣ, ಆಶ್ರಮ ಮೊದಲಾದುವುಗಳಲ್ಲಿ ಅಭಿಮಾನವುಳ್ಳ ಅಜ್ಞಾನಿಯು ಧರ್ಮದಿಂದ ನಿಯಾಮಿಸಲ್ಪಟ್ಟು ದೇವಾದಿಗಳಿಗೆ ಕರ್ಮ ಮಾಡಬೇಕಾಗಿರುವುದರಿಂದ ಪಶುವಿನಂತೆ ಪರತಂತ್ರನು ಎಂದು ಹೇಳಿದ್ದಾಯಿತು. ಅಂತಹ ಕರ್ಮಗಳು ಯಾವುವು ? ಯಾವ ದೇವಾದಿಗಳಿಗೆ ಪಶುವಿನಂತೆ ಕರ್ಮವನ್ನು ಮಾಡುತ್ತಾನೆ ? ಈ ವಿಷಯಗಳನ್ನು ಇಲ್ಲಿ ಹೇಳಿದೆ.

1 ದೇವತೆಗಳನ್ನುದ್ದೇಶಿಸಿ ಸ್ವತ್ತನ್ನು ತ್ಯಾಗಮಾಡುವುದಕ್ಕೆ ಯಾಗವೆಂದು ಹೆಸರು.

2 ಮೇಲೆ ಹೇಳಿರುವ ಕರ್ಮಗಳನ್ನು ಸಾಲ ತೀರಿಸುವಂತೆ ಮಾಡತಕ್ಕದು ಎಂಬುದು ಪಂಚಮಹಾಯಜ್ಞಪ್ರಕರಣದಲ್ಲಿ (ಶತಪಥಬ್ರಾಹ್ಮಣ, ೧, ೭, ೨, ೬) ವಿದಿತವಾಗಿದೆ.

3 ಈ ವಿಷಯವು ಅವದಾನಪ್ರಕರಣದಲ್ಲಿ (ಶ. ಬ್ರಾ. ೧, ೭, ೨, ೧) ಮೀಮಾಂಸಿತವಾಗಿದೆ.]

ಆತ್ಮೈವೇದಮಗ್ರ ಆಸೀದೇಕ ಏವ; ಸೋಽಕಾಮಯತ— ಜಾಯಾ ಮೇ ಸ್ಯಾತ್, ಅಥ ಪ್ರಜಾಯೇಯ; ಅಥ ವಿತ್ತಂ ಮೇ ಸ್ಯಾತ್, ಅಥ ಕರ್ಮ ಕುರ್ವೀಯೇತಿ; ಏತಾವಾನ್ ವೈ ಕಾಮಃ, ನೇಚ್ಛಂಶ್ಚನಾತೋ ಭೂಯೋ ವಿಂದೇತ್; ತಸ್ಮಾದಪ್ಯೇತರ್ಹ್ಯೇಕಾಕೀ ಕಾಮಯತೇ — ಜಾಯಾ ಮೇ ಸ್ಯಾತ್, ಅಥ ಪ್ರಜಾಯೇಯ; ಅಥ ವಿತ್ತಂ ಮೇ ಸ್ಯಾತ್, ಅಥ ಕರ್ಮ ಕುರ್ವೀಯೇತಿ; ಸ ಯಾವದಪ್ಯೇತೇಷಾಮೇಕೈಕಂ ನ ಪ್ರಾಪ್ನೋತಿ, ಅಕೃತ್ಸ್ನ ಏವ ತಾವನ್ಮನ್ಯತೇ ; ತಸ್ಯೋ ಕೃತ್ಸ್ನತಾ — ಮನ ಏವಾಸ್ಯಾತ್ಮಾ ವಾಗ್ಜಾಯಾ, ಪ್ರಾಣಃ ಪ್ರಜಾ, ಚಕ್ಷುರ್ಮಾನುಷಂ ವಿತ್ತಂ ಚಕ್ಷುಷಾ ಹಿ ತದ್ವಿಂದತೇ, ಶ್ರೋತ್ರಂ ದೈವಂ, ಶ್ರೋತ್ರೇಣ ಹಿ ತಚ್ಛೃಣೋತಿ; ಆತ್ಮೈವಾಸ್ಯ ಕರ್ಮ, ಆತ್ಮನಾ ಹಿ ಕರ್ಮ ಕರೋತಿ; ಸ ಏಷ ಪಾಂಕ್ತೋ ಯಜ್ಞಃ, ಪಾಂಕ್ತಃ ಪಶುಃ, ಪಾಂಕ್ತಃ ಪುರುಷಃ, ಪಾಂಕ್ತಮಿದಂ ಸರ್ವಂ ಯದಿದಂ ಕಿಂಚ ತದಿದಂ ಸರ್ವಮಾಪ್ನೋತಿ ಯ ಏವಂ ವೇದ ‖ ೧೭ ‖ ಇತಿ ಚತುರ್ಥಂ ಬ್ರಾಹ್ಮಣಮ್ ‖

ಇದಂ=ಇದು ಅಗ್ರೇ=ಮೊದಲು ಆತ್ಮಾ ಏವ ಆಸೀತ್=ಆತ್ಮನೇ ಆಗಿತ್ತು, ಏಕಃ ಏವ=ಒಬ್ಬನೇ [ಆಗಿತ್ತು]; ಸಃ=ಅವನು ಅಕಾಮಯತ=ಬಯಸಿದನು— ಮೇ=ನನಗೆ ಜಾಯಾ ಸ್ಯಾತ್=ಪತ್ನಿಯಾಗಲಿ, ಅಥ=ಯಾವುದರಿಂದ ಪ್ರಜಾಯೇಯ=ಪುತ್ರರೂಪದಿಂದ ಹುಟ್ಟುವೆನೊ, ಅಥ=ಇನ್ನು ವಿತ್ತಂ ಮೇ ಸ್ಯಾತ್=ನನಗೆ ಸಂಪತ್ತಾಗಲಿ, ಅಥ ಕರ್ಮ ಕುರ್ವೀಯ=ಯಾವುದರಿಂದ ಕರ್ಮವನ್ನು ಮಾಡಬಹುದೊ, ಇತಿ=ಎಂದು ; ಏತಾವಾನ್ ವೈ=ಇಷ್ಟೇ ಕಾಮಃ=ಕಾಮವು ; ಇಚ್ಛನ್ ಚನ=ಇಚ್ಛಿಸಿದರೂ ಅತಃ=ಇದಕ್ಕಿಂತ ಭೂಯಃ=ಹೆಚ್ಚಾಗಿ ನ ವಿಂದೇತ ಪಡೆಯಲಾರನು; ತಸ್ಮಾತ್=ಆದುದರಿಂದ ಏತರ್ಹಿ ಅಪಿ=ಈಗಲೂ ಕೂಡ ಏಕಾಕೀ=ಏಕಾಕಿಯಾದವನು ಕಾಮಯತೇ=ಬಯಸುತ್ತಾನೆ—ಜಾಯಾ ಮೇ ಸ್ಯಾತ್, ಅಥ ಪ್ರಜಾಯೇಯ ; ವಿತ್ತಂ ಮೇ ಸ್ಯಾತ್, ಅಥ ಕರ್ಮ ಕುರ್ವೀಯ ಇತಿ, ಸಃ=ಅವನು ಯಾವತ್=ಎಲ್ಲಿಯವರೆಗೆ ಏತೇಷಾಂ=ಇವುಗಳಲ್ಲಿ ಏಕೈಕಂ ಅಪಿ=ಒಂದೊಂದನ್ನೂ ಕೂಡ ಪ್ರಾಪ್ನೋತಿ=ಹೊಂದುವುದಿಲ್ಲವೊ ತಾವತ್ ಅಲ್ಲಿಯವರೆಗೆ ಅಕೃತ್ಸ್ನಃ ಏವ=ಅಪೂರ್ಣನೆಂದೇ ಮನ್ಯತೇ=ತಿಳಿಯುತ್ತಾನೆ ; ತಸ್ಯ=ಅವನ ಕೃತ್ಸ್ನತಾ ಉ=ಸಂಪೂರ್ಣತೆ—ಮನಃ ಏವ=ಮನಸ್ಸೆ ಅಸ್ಯ ಆತ್ಮಾ=ಅವನ ಆತ್ಮವು, ವಾಕ್=ವಾಕ್ಕು

ಜಾಯಾ=ಪತ್ನಿ, ಪ್ರಾಣಃ=ಪ್ರಾಣವು ಪ್ರಜಾ=ಸಂತತಿ, ಚಕ್ಷುಃ=ಕಣ್ಣು ಮಾನುಷಂ ವಿತ್ತಂ=ಮಾನುಷಸಂಪತ್ತು, ಹಿ=ಏಕೆಂದರೆ ಚಕ್ಷುಷಾ=ಕಣ್ಣಿನಿಂದಲೇ ತತ್=ಅದನ್ನು ವಿಂದತೇ=ಪಡೆಯುತ್ತಾನೆ; ಶ್ರೋತ್ರಂ ದೈವಂ=ಶ್ರೋತ್ರವು ದೈವೀ ಸಂಪತ್ತು, ಹಿ=ಏಕೆಂದರೆ ಶ್ರೋತ್ರೇಣ=ಶ್ರೋತ್ರದಿಂದಲೇ ತತ್=ಅದನ್ನು ಶೃಣೋತಿ=ಕೇಳುತ್ತಾನೆ, ಆತ್ಮಾ ಏವ=ಶರೀರವೇ ಅಸ್ಯ=ಅವನಿಗೆ ಕರ್ಮ=ಕರ್ಮವು ಹಿ: ಏಕೆಂದರೆ ಆತ್ಮನಾ=ಶರೀರದಿಂದಲೇ ಕರ್ಮ ಕರೋತಿ=ಕರ್ಮವನ್ನು ಮಾಡುತ್ತಾನೆ ಸಃ ಏಷಃ=ಆ ಈ ಪಾಂಕ್ತಃ=ಪಾಂಕ್ತವೇ ಯಜ್ಞಃ=ಯಜ್ಞವು ಪಶುಃ ಪಾಂಕ್ತಃ=ಪಶುವು ಪಾಂಕ್ತವು, ಪುರುಷಃ ಪಾಂಕ್ತಃ=ಪುರುಷನು ಪಾಂಕ್ತನು, ಯತ್ ಕಿಂಚ ಇದಂ=ಏನೇನಿದೆಯೊ ಇದಂ ಸರ್ವಂ=ಇದೆಲ್ಲವೂ ಪಾಂಕ್ತಂ=ಪಾಂಕ್ತವು; ಯಃ=ಯಾವನು ಏವಂ ವೇದ=ಹೀಗೆ ಅರಿತುಕೊಳ್ಳುತ್ತಾನೆಯೊ [ಅವನು] ತತ್ ಇದಂ ಸರ್ವಂ=ಆ ಇದೆಲ್ಲವನ್ನೂ ಆಪ್ನೋತಿ=ಹೊಂದುತ್ತಾನೆ.

ಇದು ಮೊದಲು ಆತ್ಮನೇ[1] ಆಗಿತ್ತು—ಒಂದೇ[2] ಆಗಿತ್ತು. ಅವನು ಬಯಸಿದನು[3] ನಾನು ಪುತ್ರರೂಪದಿಂದ ಹುಟ್ಟಲು ನನಗೆ ಪತ್ನಿಯು[4] ನಾನು ಕರ್ಮವನ್ನು[5] ಮಾಡಲು ನನಗೆ ಸಂಪತ್ತು ಬೇಕು.' ಕಾಮವೆಲ್ಲ ಇಷ್ಟೇ—ಇಚ್ಛಿಸಿದರೂ ಇದಕ್ಕಿಂತ ಹೆಚ್ಚಾಗಿ ಪಡೆಯಲಾರನು; ಆದುದರಿಂದ ಈಗಲೂ ಕೂಡ (ಮನುಷ್ಯನು) ಏಕಾಕಿಯಾಗಿದ್ದರೆ, 'ನಾನು ಪುತ್ರರೂಪದಿಂದ ಹುಟ್ಟಲು ನನಗೆ ಪತ್ನಿಯು ಬೇಕು, ನಾನು ಕರ್ಮವನ್ನು ಮಾಡಲು ನನಗೆ ಸಂಪತ್ತು ಬೇಕು' ಎಂದು ಬಯಸುತ್ತಾನೆ ಅವನು ಎಲ್ಲಿಯವರೆಗೆ ಇವುಗಳಲ್ಲಿ ಒಂದೊಂದನ್ನು ಕೂಡ ಹೊಂದುವುದಿಲ್ಲವೊ ಅಲ್ಲಿಯವರೆಗೆ ತಾನು ಅಪೂರ್ಣನೆಂದೇ ತಿಳಿಯುತ್ತಾನೆ. ಅವನ ಸಂಪೂರ್ಣತೆಯು (ಹೀಗೆ ಉಂಟಾಗುತ್ತದೆ).[6] ಮನಸ್ಸು ಅವನ ಆತ್ಮವು, ವಾಕ್ಕು ಅವನ ಪತ್ನಿ, ಪ್ರಾಣವು ಅವನ ಸಂತತಿ, ಕಣ್ಣು ಅವನ ಮಾನುಷಸಂಪತ್ತು,[7] ಏಕೆಂದರೆ ಕಣ್ಣಿನಿಂದಲೇ ಅದನ್ನು ಪಡೆಯುತ್ತಾನೆ; ಶ್ರೋತ್ರವು ಅವನ ದೈವೀ ಸಂಪತ್ತು,[8] ಏಕೆಂದರೆ ಅವನು ಶ್ರೋತ್ರದಿಂದಲೇ ಅದನ್ನು ಕೇಳುತ್ತಾನೆ; ಮತ್ತು ಶರೀರವು ಅವನ ಕರ್ಮಕ್ಕೆ (ಕರಣವು), ಏಕೆಂದರೆ ಅವನು ಶರೀರದಿಂದಲೇ ಕರ್ಮವನ್ನು ಮಾಡುತ್ತಾನೆ (ಹೀಗೆ) ಈ ಯಜ್ಞಕ್ಕೆ ಐದು ಅಂಗಗಳಿವೆ, ಪಶುಗಳಿಗೆ ಐದು ಅಂಗಗಳಿವೆ, ಮನುಷ್ಯನಿಗೆ ಐದು ಅಂಗಗಳಿವೆ[9] ಮತ್ತು ಏನೇನಿದೆಯೊ ಇದೆಲ್ಲವೂ ಐದು ಅಂಗಗಳನ್ನು ಹೊಂದಿದೆ. ಯಾವನು ಹೀಗೆ ಅರಿತುಕೊಳ್ಳುವನೊ[10] ಅವನು ಇವೆಲ್ಲವನ್ನೂ ಹೊಂದುತ್ತಾನೆ.

[ಮನುಷ್ಯನ ಪ್ರವೃತ್ತಿಗಳಿಗೆಲ್ಲ ಕಾಮ ಅಥವಾ ಏಷಣೆ ಹೇತುವು. ಸ್ವಾಭಾವಿಕವಾದ ಅವಿದ್ಯೆಯಲ್ಲಿರುವ ಅಲ್ಪಬುದ್ಧಿಯುಳ್ಳವರು ಹೊರಗಿರುವ ಕಾಮಗಳನ್ನು ಅನುಸರಿಸುತ್ತಾರೆ ಎಂದು ಕಾಠಕಶ್ರುತಿಯು ಹೇಳುತ್ತದೆ. 'ಇದು ಕಾಮ, ಇದು ಕ್ರೋಧ' ಎಂದು ಗೀತೆ (೩, ೩೭) ಹೇಳುತ್ತದೆ ಮತ್ತು ಮನುಸಂಹಿತೆಯಲ್ಲಿಯೂ (೨, ೪) 'ಸಮಸ್ತ ಪ್ರವೃತ್ತಿಗಳೂ ಕಾಮದಿಂದಲೇ ಹೊರಡುತ್ತವೆ' ಎಂದು ಹೇಳಿದೆ. ಈ ವಿಷಯವು ಅಧ್ಯಾಯದ ಕೊನೆಯವರೆಗೂ ವಿವರಿಸಲ್ಪಟ್ಟಿದೆ.

1 ಶರೀರೇಂದ್ರಿಯಗಳ ಅಭಿಮಾನಿಯಾದ ಅಜ್ಞಾನಿ.

- ಈ ಆತ್ಮನಿಗಿಂತ ಭಿನ್ನವೂ ಕಾಮ್ಯವೂ ಆದ ಪತ್ನಿಯೇ ಮೊದಲಾದ ಭೇದರೂಪವು ಇರಲಿಲ್ಲ

3 ಕರ್ತ್ರಾದಿಕಾರಕಗಳು ಕ್ರಿಯೆಗಳು ಫಲಗಳು ಇವುಗಳ ಅಧ್ಯಾರೋಪವೆಂಬ ಅವಿದ್ಯಾವಾಸನೆಯಿಂದ ವಾಸಿತನಾದ ಅವನು ಬಯಸಿದನು.

4 ಪತ್ನಿಯಿಲ್ಲದಿದ್ದರೆ ಯಜಮಾನನಿಗೆ ಕರ್ಮಕ್ಕೆ ಅಧಿಕಾರವಿಲ್ಲ

5 ಅಭ್ಯುದಯಕ್ಕೂ ನಿಃಶ್ರೇಯಸಕ್ಕೂ ಸಾಧನವಾದ ಕರ್ಮ.

6 ತಾನು ಅಪೂರ್ಣನೆಂದು ಅರಿತಿರುವವನು——ವ್ಯವಹಾರದಲ್ಲಿ ಪತ್ನಿ ಮೊದಲಾದವರ ಮೂಲಕ ಪೂರ್ಣತೆಯನ್ನು ಪಡೆಯುವಂತೆ——ಕಲ್ಪನೆಯ ಮೂಲಕ ಪೂರ್ಣತೆಯನ್ನು ಪಡೆಯಬಹುದು ಇಲ್ಲಿ ಎಲ್ಲ ಕಾರ್ಯ-ಕರಣ-ಸಮೂಹವು ಮನಸ್ಸನ್ನು ಅನುಸರಿಸಿಕೊಂಡಿರುವುದರಿಂದ ಮನಸ್ಸನ್ನು ಆತ್ಮನೆಂದು ಪರಿಕಲ್ಪಿಸಿರುತ್ತದೆ.

7 ಪ್ರಾಣಚೇಷ್ಟಾದಿಕರ್ಮಗಳು ಕಣ್ಣಿಗೆ ಕಾಣುವ ಗವಾದಿವಿತ್ತದಿಂದ ಆಗುವುದರಿಂದ ಕಣ್ಣು ಮಾನುಷವಿತ್ತವೆಂದು ಹೇಳಿದೆ.

8 ಉಪಾಸನೆಯು ದೇವವಿಷಯವಾದ್ದರಿಂದ ಶ್ರೋತ್ರವು ದೈವವಿತ್ತವು ಏಕೆಂದರೆ ಶ್ರೋತ್ರದಿಂದಲೇ ದೈವವಿತ್ತವಾದ ಉಪಾಸನೆಯನ್ನು ಶ್ರವಣಮಾಡುತ್ತಾನೆ.

9 ಮನಸ್ಸು ವಾಕ್ಕು ಪ್ರಾಣ ಕಣ್ಣು ಕಿವಿ ಮನುಷ್ಯರ ಮತ್ತು ಪಶುಗಳ ಸಹಾಯದಿಂದ ಒಂದು ಯಜ್ಞವು ನೆರವೇರುತ್ತದೆ.

10 ಯಾವನು ಹೀಗೆ ತಾನು ಪಾಂಕ್ತರೂಪವಾದ ಯಜ್ಞವೆಂದು ಅರಿತುಕೊಳ್ಳುವನೊ ಅವನು ಇದೆಲ್ಲವನ್ನೂ ಜಗದಾತ್ಮತ್ವದಿಂದ ಪಡೆದುಕೊಳ್ಳುತ್ತಾನೆ.]

## ಐದನೆಯ ಬ್ರಾಹ್ಮಣ

ಯತ್ ಸಪ್ತಾನ್ನಾನಿ ಮೇಧಯಾ ತಪಸಾಜನಯತ್ ಪಿತಾ ।
ಏಕಮಸ್ಯ ಸಾಧಾರಣಂ ದ್ವೇ ದೇವಾನಭಾಜಯತ್ ॥
ತ್ರೀಣ್ಯಾತ್ಮನೇಽಕುರುತ ಪಶುಭ್ಯ ಏಕಂ ಪ್ರಾಯಚ್ಛತ್ ।
ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ ॥
ಕಸ್ಮಾತ್ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದಾ ।
ಯೋ ವೈತಾಮಕ್ಷಿತಿಂ ವೇದ ಸೋಽನ್ನಮತ್ತಿ ಪ್ರತೀಕೇನ ।
ಸ ದೇವಾನಪಿಗಚ್ಛತಿ ಸ ಊರ್ಜಮುಪಜೀವತಿ ॥

ಇತಿ ಶ್ಲೋಕಾಃ ॥ ೧ ॥

ಪಿತಾ=ತಂದೆಯು ಮೇಧಯಾ=ಉಪಾಸನೆಯಿಂದಲೂ ತಪಸಾ=ಕರ್ಮದಿಂದಲೂ ಯತ್=ಯಾವ ಸಪ್ತ ಅನ್ನಾನಿ=ಏಳು ಬಗೆಯಾದ ಅನ್ನಗಳನ್ನು ಅಜನಯತ್=ಸೃಷ್ಟಿಸಿದನೊ [ತಾನಿ ಪ್ರಕಾಶಯಿಷ್ಯಾಮಃ=ಅವುಗಳನ್ನು ಪ್ರಕಾಶಿಸುತ್ತೇವೆ]. ಏಕಂ=ಒಂದು ಅನ್ನವು ಅಸ್ಯ=ಈ ಜಗತ್ತಿಗೆ ಸಾಧಾರಣಂ=ಸಾಮಾನ್ಯವಾಗಿದೆ ; ದ್ವೇ=ಎರಡನ್ನು ದೇವಾನ್ ದೇವತೆಗಳಿಗೆ ಅಭಾಜಯತ್=ಭಾಗಮಾಡಿ ಕೊಟ್ಟನು ; ತ್ರೀಣಿ=ಮೂರನ್ನು ಆತ್ಮನೇ ಅಕುರುತ=ತನಗಾಗಿ ಇಟ್ಟುಕೊಂಡನು ; ಏಕಂ=ಒಂದನ್ನು ಪಶುಭ್ಯಃ=ಪಶುಗಳಿಗೆ ಪ್ರಾಯಚ್ಛತ=ಕೊಟ್ಟನು ; ಯತ್ ಚ ಪ್ರಾಣಿತಿ=ಯಾವುದು ಪ್ರಾಣವಂತವಾಗಿದೆಯೊ ಯತ್ ಚ ನ=ಯಾವುದು ಪ್ರಾಣವಂತವಾಗಿಲ್ಲವೊ ಸರ್ವಂ=ಎಲ್ಲವೂ ತಸ್ಮಿನ್=ಅದರಲ್ಲಿ ಪ್ರತಿಷ್ಠಿತಂ=ಪ್ರತಿಷ್ಠಿತವು ಸರ್ವದಾ=ಯಾವಾಗಲೂ ಅದ್ಯಮಾನಾನಿ=ತಿನ್ನಲ್ಪಡುತ್ತಿದ್ದರೂ ತಾನಿ=ಅವು ಕಸ್ಮಾತ್=ಏಕೆ ನ ಕ್ಷೀಯಂತೇ=ಕ್ಷಯಿಸುವುದಿಲ್ಲ ? ಯಃ ವೈ=ಯಾವನು ಏತಾಂ ಅಕ್ಷಿತಿಂ=ಈ ಅಕ್ಷಯದ [ಕಾರಣವನ್ನು] ವೇದ=ತಿಳಿದುಕೊಳ್ಳುವನೊ ಸಃ=ಅವನು ದೇವಾನ್=ದೇವತೆಗಳನ್ನು ಅಪಿಗಚ್ಛತಿ=ಸೇರುತ್ತಾನೆ, ಸಃ=ಅವನು ಊರ್ಜಂ=ಅಮೃತವನ್ನು ಉಪಜೀವತಿ=ಕುಡಿದು ಜೀವಿಸುವನು ; ಇತಿ ಶ್ಲೋಕಾಃ=ಇವು ಶ್ಲೋಕಗಳು.

೧. ತಂದೆಯು ಉಪಾಸನೆಯಿಂದಲೂ ಕರ್ಮದಿಂದಲೂ ಯಾವ ಸಪ್ತಾನ್ನಗಳನ್ನು ಸೃಷ್ಟಿಸಿದನೋ (ಅವುಗಳನ್ನು ಪ್ರಕಾಶಿಸುತ್ತೇವೆ): ಒಂದು ಅನ್ನವು ಈ ಜಗತ್ತಿಗೆ ಸಾಮಾನ್ಯವಾಗಿರುವುದು , ಎರಡನ್ನು ದೇವತೆಗಳಿಗೆ ಭಾಗಮಾಡಿಕೊಟ್ಟನು , ಮೂರನ್ನು ತನಗಾಗಿ ಇಟ್ಟುಕೊಂಡನು ; (ಉಳಿದ)

ಒಂದನ್ನು ಪಶುಗಳಿಗೆ ಕೊಟ್ಟನು. ಯಾವುದು ಪ್ರಾಣವಂತವಾಗಿದೆಯೊ, ಯಾವುದು ಇಲ್ಲವೊ—ಎಲ್ಲವೂ ಅದರಲ್ಲಿ ಪ್ರತಿಷ್ಠಿತವಾಗಿದೆ. ಯಾವಾಗಲೂ ತಿನ್ನಲ್ಪಡುವ ಈ ಅನ್ನಗಳು ಏಕೆ ಕ್ಷಯಿಸುವುದಿಲ್ಲ? ಯಾವನು ಈ ಅಕ್ಷಯದ (ಕಾರಣವನ್ನು) ತಿಳಿದುಕೊಳ್ಳುವನೊ ಅವನು ಪ್ರತೀಕದಿಂದ (ಪ್ರಧಾನವಾಗಿ) ಅನ್ನವನ್ನು ತಿನ್ನುತ್ತಾನೆ. ಅವನು ದೇವಾತ್ಮಭಾವವನ್ನು ಪಡೆಯುತ್ತಾನೆ. ಅವನು ಅಮೃತವನ್ನು ಕುಡಿದು ಜೀವಿಸುತ್ತಾನೆ. ಇವು ಶ್ಲೋಕಗಳು.

[ಪ್ರತಿಯೊಬ್ಬನೂ ತನ್ನ ಉಪಾಸನಾ ಕರ್ಮಗಳಿಗೆ ಅನುರೂಪವಾಗಿ ಇಡಿಯ ಜಗತ್ತಿನ ಭೋಕ್ತೃವೂ ಭೋಗ್ಯವೂ ಆಗಿರುತ್ತಾನೆ ಎಂದು ಹೇಳಿದ್ದಾಯಿತು. ಪ್ರತಿಯೊಬ್ಬನೂ ಪ್ರತಿಯೊಂದಕ್ಕೂ ಕರ್ತವೂ ಕಾರ್ಯವೂ ಎಂದು ತಾತ್ಪರ್ಯ. ಇದನ್ನೇ ಮುಂದೆ ಬರುವ ಮಧುವಿದ್ಯೆಯಲ್ಲಿ ಎಲ್ಲವೂ ಎಲ್ಲಕ್ಕೂ ಕಾರ್ಯವಾಗಿರುವ ಮಧು ಎಂದು ಆತ್ಮೈಕತ್ವವಿಜ್ಞಾನಕ್ಕಾಗಿ ಹೇಳಲ್ಪಡುವುದು. ಅಜ್ಞಾನಿಯು ಪಾಂಕ್ತವಾದ ಕಾಮ್ಯ ಕರ್ಮದಿಂದಲೂ ಉಪಾಸನೆಯಿಂದಲೂ ತನಗೆ ಭೋಜ್ಯವಾಗಿ ಸೃಷ್ಟಿಸಿಕೊಂಡಿರುವ ಈ ಜಗತ್ತು ಏಳು ವಿಧವಾಗಿ ಕಾರ್ಯ-ಕಾರಣ-ಭಾವದಿಂದ ವಿಂಗಡಿಸಲ್ಪಟ್ಟಿದೆ. ಇವಕ್ಕೆ ಸಪ್ತಾನ್ನಗಳೆಂದು ಹೆಸರು.]

'ಯತ್ ಸಪ್ತಾನ್ನಾನಿ ಮೇಧಯಾ ತಪಸಾಜನಯತ್ ಪಿತಾ' ಇತಿ ಮೇಧಯಾ ಹಿ ತಪಸಾಜನಯತ್ ಪಿತಾ। 'ಏಕಮಸ್ಯ ಸಾಧಾರಣಮ್' ಇತೀದಮೇವಾಸ್ಯ ತತ್ಸಾಧಾರಣಮನ್ನಂಯದಿದಮದ್ಯತೇ। ಸ ಯ ಏತದುಪಾಸ್ತೇ ನ ಸ ಪಾಪ್ಮನೋ ವ್ಯಾವರ್ತತೆ, ಮಿಶ್ರಂ ಹ್ಯೇತತ್ । 'ದ್ವೇ ದೇವಾನಭಾಜಯತ್' ಇತಿ ಹುತಂ ಚ ಪ್ರಹುತಂ ಚ, ತಸ್ಮಾದ್ದೇವೇಭ್ಯೋ ಜುಹ್ವತಿ ಚ ಪ್ರ ಚ ಜುಹ್ವತಿ; ಅಥೋ ಆಹುರ್ದರ್ಶಪೂರ್ಣಮಾಸಾವಿತಿ । ತಸ್ಮಾನ್ನೇಷ್ಟಿಯಾಜುಕಃ ಸ್ಯಾತ್। 'ಪಶುಭ್ಯ ಏಕಂ ಪ್ರಾಯಚ್ಛತ್' ಇತಿ ತತ್ ಪಯಃ। ಪಯೋ ಹ್ಯೇವಾಗ್ರೇ ಮನುಷ್ಯಾಶ್ಚ ಪಶವಶ್ಚೋಪಜೀವಂತಿ; ತಸ್ಮಾತ್ ಕುಮಾರಂ ಜಾತಂ ಘೃತಂ ವೈ ವಾಗ್ರೇ ಪ್ರತಿಲೇಹಯಂತಿ, ಸ್ತನಂ ವಾನುಧಾಪಯಂತಿ; ಅಥ ವತ್ಸಂ ಜಾತಮಾಹುರತೃಣಾದ ಇತಿ । 'ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ' ಇತಿ ಪಯಸಿ ಹೀದಂ ಸರ್ವಂ ಪ್ರತಿಷ್ಠಿತಂ

ಯಚ್ಚ ಪ್ರಾಣಿತಿ ಯಚ್ಚ ನ । ತದ್ಯದಿದಮಾಹುಃ, ಸಂವತ್ಸರಂ ಪಯಸಾ ಜುಹ್ವದಪ ಪುನರ್ಮೃತ್ಯುಂ ಜಯತೀತಿ, ನ ತಥಾ ವಿದ್ಯಾತ್; ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮಪ ಜಯತ್ಯೇವಂ ವಿದ್ವಾನ್, ಸರ್ವಂ ಹಿ ದೇವೇಭ್ಯೋಽನ್ನಾದ್ಯಂ ಪ್ರಯಚ್ಛತಿ । 'ಕಸ್ಮಾತ್ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದಾ' ಇತಿ ಪುರುಷೋ ವಾ ಅಕ್ಷಿತಿಃ, ಸ ಹೀದಮನ್ನಂ ಪುನಃ ಪುನರ್ಜನಯತೇ । 'ಯೋ ವೈತಾಮಕ್ಷಿತಿಂವೇದ' ಇತಿ ಪುರುಷೋ ವಾ ಅಕ್ಷಿತಿಃ, ಸ ಹೀದಮನ್ನಂಧಿಯಾ ಧಿಯಾ ಜನಯತೇ ಕರ್ಮಭಿಃ; ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ; 'ಸೋಽನ್ನಮತ್ತಿ ಪ್ರತೀಕೇನ' ಇತಿ ಮುಖಂ ಪ್ರತೀಕಂ ಮುಖೇನೇತ್ಯೇತತ್ । ಸ ದೇವಾನಪಿಗಚ್ಛತಿ, ಸ ಊರ್ಜಮುಪಜೀವತಿ ಇತಿ ಪ್ರಶಂಸಾ ॥ ೨ ॥

ಪಿತಾ ಯತ್ ಮೇಧಯಾ ತಪಸಾ ಸಪ್ತ ಅನ್ನಾನಿ ಅಜನಯತ್ ಇತಿ=ಎಂಬ [ಮಂತ್ರದ ಅರ್ಥ]: ಪಿತಾ ಮೇಧಯಾ ತಪಸಾ ಹಿ ಅಜನಯತ್, ಏಕಂ ಅಸ್ಯ ಸಾಧಾರಣಂ ಇತಿ=ಎಂಬ [ಮಂತ್ರದ ಅರ್ಥ]: ಯತ್=ಯಾವ ಇದಂ=ಈ [ಅನ್ನವು] ಅದ್ಯತೇ=ತಿನ್ನಲ್ಪಡುತ್ತದೆಯೊ ಇದಂ ಏವ=ಇದೇ ಅಸ್ಯ ಭೋಕ್ತೃ ಮೂಲದ ಸಾಧಾರಣಂ ಅನ್ನಂ=ಸಾಮಾನ್ಯವಾದ ಅನ್ನ ಸಃ=ಯಃ ಆ ಯಾವನು ಏತತ್=ಇದನ್ನು ಉಪಾಸ್ತೇ=ಉಪಾಸಿಸುವನೊ ಸಃ=ಅವನು ಪಾಪ್ಮನಃ=ಪಾಪದಿಂದ ನ ವ್ಯಾವರ್ತತೇ=ನಿವೃತ್ತನಾಗುವುದಿಲ್ಲ; ಹಿ=ಏಕೆಂದರೆ ಏತತ್=ಇದು ಮಿಶ್ರಂ=ಸರ್ವಭೋಜ್ಯವು, ಎಲ್ಲರಿಗೂ ಸಾಮಾನ್ಯವು ದ್ವೇ ದೇವಾನ್ ಅಭಾಜಯತ್ ಇತಿ=ಎಂಬ [ಮಂತ್ರದ ಅರ್ಥ]: ಹುತಂ ಚ=ಅಗ್ನಿಯಲ್ಲಿ ಹೋಮಮಾಡುವುದು. ಪ್ರಹುತಂ ಚ=ಹೋಮಮಾಡಿದ ಮೇಲೆ ಬಲಿ ಕೊಡುವುದು ಎಂದರೆ ಇತರ ದಾನಗಳನ್ನು ಕೊಡುವುದು; ತಸ್ಮಾತ್=ಆದುದರಿಂದ ದೇವೇಭ್ಯಃ=ದೇವತೆಗಳಿಗೆ ಜುಹ್ವತಿ ಚ=ಹೋಮಮಾಡುತ್ತಾರೆ, ಪ್ರಜುಹ್ವತಿ ಚ=ಬಲಿಹರಣ ಮಾಡುತ್ತಾರೆ; ಅಥೋ ಆದರೆ [ಕೆಲವರು] ಆಹುಃ=ಹೇಳುತ್ತಾರೆ–ದರ್ಶ–ಪೂರ್ಣ–ಮಾಸೌ–ದರ್ಶಪೂರ್ಣ ಮಾಸಗಳು ಇತಿ=ಎಂದು. ತಸ್ಮಾತ್=ಆದುದರಿಂದ ಇಷ್ಟಿ ಯಾಜುಕಃ=ಕಾಮ್ಯೇಷ್ಟಿಗಳನ್ನು ಮಾಡುವವನು ನ ಸ್ಯಾತ್ ಆಗಬಾರದು. ಏಕಂ ಪಶುಭ್ಯಃ ಪ್ರಾಯಚ್ಛತ್ ಇತಿ=ಎಂಬ [ಮಂತ್ರದ ಅರ್ಥ]; ತತ್=ಅದು ಪಯಃ=ಹಾಲು. ಹಿ=ಏಕೆಂದರೆ ಮನುಷ್ಯಾಃ ಚ ಪಶವಃ ಚ=ಮನುಷ್ಯರೂ ಪಶುಗಳೂ ಅಗ್ರೇ=ಮೊದಲು ಪಯಃ ಏವ=ಹಾಲನ್ನೇ [ಕುಡಿದು] ಉಪಜೀವಂತಿ=ಜೀವಿಸಿರುತ್ತಾರೆ. ತಸ್ಮಾತ್=

ಆದುದರಿಂದ ಜಾತಂ ಕುಮಾರಂ=ಹುಟ್ಟಿದ ಕುಮಾರನಿಗೆ ಅಗ್ರೇ=ಮೊದಲು ಘೃತಂ ಏವ=ತುಪ್ಪವನ್ನೇ ಪ್ರತಿಲೇಹಯಂತಿ=ನೆಕ್ಕಿಸುತ್ತಾರೆ, ಸ್ತನಂ ವಾ=ಸ್ತನವನ್ನಾಗಲಿ ಅನುಧಾಪಯಂತಿ=ಉಣ್ಣಿಸುತ್ತಾರೆ; ಅಥ ಇನ್ನು ಜಾತಂ ವತ್ಸಂ=ಹುಟ್ಟಿದ ಕರುವನ್ನು ಅತೃಣಾದಃ=ಹುಲ್ಲನ್ನು ತಿನ್ನದವನು ಇತಿ=ಎಂದು ಆಹುಃ=ಹೇಳುತ್ತಾರೆ. ಯತ್ ಚ ಪ್ರಾಣಿತಿ ಯತ್ ಚ ನ ಸರ್ವಂ ಪ್ರತಿಷ್ಠಿತಂ ಇತಿ=ಎಂಬ [ಮಂತ್ರದ ಅರ್ಥ]: ಯತ್ ಚ ಪ್ರಾಣಿತಿ ಯತ್ ಚ ನ ಇದಂ ಸರ್ವಂ ಪಯಸಿ ಹಿ=ಹಾಲಿನಲ್ಲಿಯೇ ಪ್ರತಿಷ್ಠಿತಂ=ಪ್ರತಿಷ್ಠಿತವು. ತತ್=ಈ ವಿಷಯದಲ್ಲಿ ಇದಂ ಯತ್ ಆಹುಃ–ಈ ಯಾವುದನ್ನು ಹೇಳುವರೋ— ಪಯಸಾ=ಹಾಲಿನಿಂದ ಸಂವತ್ಸರಂ–ಒಂದು ವರ್ಷದ ವರೆಗೆ ಜುಹ್ವತ್=ಹೋಮ ಮಾಡಿದರೆ ಪುನರ್ಮೃತ್ಯುಂ–ಪುನರ್ಮರಣವನ್ನು ಅಪಜಯತಿ=ಜಯಿಸುತ್ತಾನೆ ಇತಿ=ಎಂದು—[ಅದನ್ನು] ತಥಾ=ಹಾಗೆ ನ ವಿದ್ಯಾತ್=ಅರಿಯಬಾರದು, ಏವಂ=ಹೀಗೆ ವಿದ್ವಾನ್=ತಿಳಿದಿರುವವನು ಯತ್ ಅಹಃ ಏವ=ಆ ದಿನದಲ್ಲಿಯೇ ಪುನರ್ಮೃತ್ಯುಂ ಅಪಜಯತಿ, ಹಿ–ಏಕೆಂದರೆ ದೇವೇಭ್ಯಃ=ದೇವತೆಗಳಿಗೆ ಸರ್ವಂ=ಎಲ್ಲ ಅನ್ನಾದ್ಯಂ=ಭಕ್ಷ್ಯಾನ್ನವನ್ನು ಪ್ರಯಚ್ಛತಿ=ಕೊಡುತ್ತಾನೆ. ಸರ್ವದಾ ಅದ್ಯಮಾನಾನಿ ತಾನಿ ಕಸ್ಮಾತ್ ನ ಕ್ಷೀಯಂತೇ ಇತಿ=ಎಂಬ [ಮಂತ್ರದ ಅರ್ಥ]: ಅದನೇ ಅಕ್ಷಿತಿಃ=ಅವುಗಳ ಅಕ್ಷಯಕ್ಕೆ [ಕಾರಣವು], ಹಿ=ಏಕೆಂದರೆ ಸಃ–ಅವನು ಇದಂ ಅನ್ನಂ=ಈ ಅನ್ನವನ್ನು ಪುನಃ ಪುನಃ ಜನಯತೇ–ಸೃಷ್ಟಿಸುತ್ತಾನೆ. ಯಃ ವೈ ಏತಾಂ ಅಕ್ಷಿತಿಂ ವೇದ ಇತಿ=ಎಂಬ [ಮಂತ್ರದ ಅರ್ಥ]· ಪುರುಷಃ ವೈ ಅಕ್ಷಿತಿಃ, ಸಃ ಹಿ ಇದಂ ಅನ್ನಂ ಧಿಯಾ=ಉಪಾಸನೆಯಿಂದಲೂ ಕರ್ಮಭಿಃ=ಕರ್ಮಗಳಿಂದಲೂ ಜನಯತೇ=ಸೃಷ್ಟಿಸುತ್ತಾನೆ, ಏತತ್=ಇದನ್ನು ಯತ್ ಹ ನ ಕುರ್ಯಾತ್=ಮಾಡದೆ ಇದ್ದರೆ ಕ್ಷೀಯೇತ ಹ=ಕ್ಷಯವಾಗುತ್ತಿತ್ತು. ಸಃ ಪ್ರತೀಕೇನ ಅನ್ನಂ ಅತ್ತಿ ಇತಿ=ಎಂಬ [ಮಂತ್ರದ ಅರ್ಥ]· ಪ್ರತೀಕಂ ಮುಖಂ=ಪ್ರತೀಕವೆಂದರೆ ಮುಖ್ಯ, ಮುಖೇನ ಇತಿ ಏತತ್=ಮುಖ್ಯವಾಗಿ ಎಂದರ್ಥ. ಸಃ ದೇವಾನ್ ಅಪಿಗಚ್ಛತಿ, ಸಃ ಊರ್ಜಂ ಉಪಜೀವತಿ ಇತಿ=ಎಂಬ [ಮಂತ್ರದ ಅರ್ಥ]· ಪ್ರಶಂಸಾ=ಪ್ರಶಂಸೆಯು.

೨. ತಂದೆಯು ಉಪಾಸನೆಯಿಂದಲೂ ಕರ್ಮದಿಂದಲೂ ಸಪ್ತಾನ್ನಗಳನ್ನು ಸೃಷ್ಟಿಸಿದನು' ಎಂಬುದರ (ಅರ್ಥ): ತಂದೆಯು ಉಪಾಸನೆಯಿಂದಲೂ ಕರ್ಮದಿಂದಲೂ ಅವುಗಳನ್ನು ಸೃಷ್ಟಿಸಿದನು. 'ಒಂದು ಅನ್ನವು ಈ ಜಗತ್ತಿಗೆ ಸಾಮಾನ್ಯವಾಗಿರುವುದು' ಎಂಬುದರ (ಅರ್ಥ): ತಿನ್ನಲ್ಪಡುವ ಈ ಅನ್ನವು ಭೋಕ್ತೃಸಮೂಹಕ್ಕೆ ಸಾಮಾನ್ಯವಾಗಿದೆ. ಯಾವನು ಈ ಅನ್ನವನ್ನು ಉಪಾಸಿಸುವನೋ ಅವನು ಪಾಪದಿಂದ ನಿವೃತ್ತನಾಗುವುದಿಲ್ಲ,[1] ಏಕೆಂದರೆ ಇದು ಸರ್ವಭೋಜ್ಯವಾಗಿದೆ 'ಎರಡನ್ನು ದೇವತೆಗಳಿಗೆ ಭಾಗಮಾಡಿಕೊಟ್ಟನು' ಎಂಬುದರ (ಅರ್ಥ): ಅಗ್ನಿಯಲ್ಲಿ ಹೋಮಮಾಡುವುದು

ಹೋಮಮಾಡಿದ ಮೇಲೆ ಬಲಿಕೊಡುವುದು ಎಂದರೆ ಇತರ ದಾನಗಳನ್ನು ಕೊಡುವುದು. ಆದುದರಿಂದ ದೇವತೆಗಳಿಗೆ ಹೋಮಮಾಡುತ್ತಾರೆ ಮತ್ತು ಬಲಿಹರಣವನ್ನು ಮಾಡುತ್ತಾರೆ. ಆದರೆ ಕೆಲವರು, ಇವೆರಡೂ ದರ್ಶಪೂರ್ಣಮಾಸಗಳೆಂದು[2] ಹೇಳುತ್ತಾರೆ ಆದುರಿಂದ ಕಾಮ್ಯೇಷ್ಟಿಗಳನ್ನು ಮಾಡುವವನು ಆಗಬಾರದು. 'ಒಂದನ್ನು ಪಶುಗಳಿಗೆ ಕೊಟ್ಟನು' ಎಂಬುದರ (ಅರ್ಥ) ಅದು ಹಾಲು; ಏಕೆಂದರೆ ಮನುಷ್ಯರೂ ಪಶುಗಳೂ ಮೊದಲು ಹಾಲನ್ನೇ ಕುಡಿದು ಜೀವಿಸಿರುತ್ತಾರೆ ಆದುದರಿಂದ ಹುಟ್ಟಿದ ಮಗುವಿಗೆ ಮೊದಲು ತುಪ್ಪವನ್ನೇ ನೆಕ್ಕಿಸುತ್ತಾರೆ ಅಥವಾ ಮೊಲೆ ಕೊಡುತ್ತಾರೆ ಮತ್ತು ಹುಟ್ಟಿದ ಕರುವನ್ನು 'ಹುಲ್ಲನ್ನು ತಿನ್ನದಿರುವುದು'[3] ಎಂದು ಹೇಳುತ್ತಾರೆ 'ಯಾವುದು ಪ್ರಾಣವಂತವಾಗಿದೆಯೋ, ಯಾವುದು ಇಲ್ಲವೋ—ಎಲ್ಲವೂ ಅದರಲ್ಲಿ ಪ್ರತಿಷ್ಠಿತವಾಗಿದೆ.' ಎಂಬುದರ (ಅರ್ಥ): ಯಾವುದು ಪ್ರಾಣವಂತವಾಗಿದೆಯೊ, ಇಲ್ಲವೊ—ಇದೆಲ್ಲವೂ ಹಾಲಿನಲ್ಲಿಯೇ ಪ್ರತಿಷ್ಠಿತವಾಗಿದೆ.[4] ಹಾಲಿನಿಂದ ಒಂದು ವರ್ಷದವರೆಗೆ ಹೋಮಮಾಡಿದರೆ ಪುನರ್ಮರಣವನ್ನು ಜಯಿಸುತ್ತಾನೆ ಎಂದು ಕೆಲವರು ಹೇಳುತ್ತಾರೆ, ಅದನ್ನು ಹಾಗೆ ಅರಿಯಬಾರದು. ಹೀಗೆ ತಿಳಿದಿರುವವನು ಯಾವ ದಿನದಲ್ಲಿ ಹೋಮಮಾಡುವನೊ ಆ ದಿನದಲ್ಲಿಯೇ ಪುನರ್ಮರಣವನ್ನು ಜಯಿಸುತ್ತಾನೆ.[5] ಏಕೆಂದರೆ ದೇವತೆಗಳಿಗೆ ಭಕ್ಷ್ಯಾನ್ನವನ್ನೆಲ್ಲ ಕೊಡುತ್ತಾನೆ. 'ಯಾವಾಗಲೂ ತಿನ್ನಲ್ಪಡುವ ಈ ಅನ್ನಗಳು ಏಕೆ ಕ್ಷಯಿಸುವುದಿಲ್ಲ ?' ಎಂಬುದರ (ಅರ್ಥ), ಮನುಷ್ಯನೇ ಅವುಗಳ ಅಕ್ಷಯಕ್ಕೆ (ಕಾರಣನು), ಏಕೆಂದರೆ ಅವನು ಈ ಅನ್ನವನ್ನು ಪುನಃ ಪುನಃ ಸೃಷ್ಟಿಸುತ್ತಾನೆ. 'ಯಾವನು ಈ ಅಕ್ಷಯದ (ಕಾರಣವನ್ನು) ತಿಳಿದುಕೊಂಡಿರುವನೊ' ಎಂಬುದರ (ಅರ್ಥ): ಮನುಷ್ಯನೇ ಅವುಗಳ ಅಕ್ಷಯಕ್ಕೆ ಕಾರಣನು ಏಕೆಂದರೆ ಅವನು ಈ ಅನ್ನವನ್ನು ಉಪಾಸನೆಯಿಂದಲೂ ಕರ್ಮಗಳಿಂದಲೂ ಸೃಷ್ಟಿಸುತ್ತಾನೆ. ಅವನು ಹೀಗೆ ಮಾಡದಿದ್ದರೆ ಅದು ಕ್ಷಯವಾಗುತ್ತಿತ್ತು. 'ಅವನು ಪ್ರತೀಕದಿಂದ ಅನ್ನವನ್ನು ತಿನ್ನುತ್ತಾನೆ'[6] ಎಂಬುದರ (ಅರ್ಥ) : ಪ್ರತೀಕವೆಂದರೆ ಮುಖ್ಯ, ಮುಖ್ಯವಾಗಿ (ಪ್ರಧಾನವಾಗಿ) ಎಂದರ್ಥ. 'ಅವನು ದೇವಾತ್ಮಭಾವವನ್ನು ಪಡೆಯುತ್ತಾನೆ, ಅವನು ಅಮೃತವನ್ನು ಕುಡಿದು ಜೀವಿಸುತ್ತಾನೆ' ಎಂಬುದರ (ಅರ್ಥ): ಇದು ಪ್ರಶಂಸೆ-

[[1] ಯಾವನು ಅದೃಷ್ಟಫಲಕ್ಕೋಸ್ಕರ ಕರ್ಮವನ್ನು ಮಾಡದೆ ತನ್ನ ಶರೀರ ಧಾರಣೆಗೋಸ್ಕರ ಅನ್ನವನ್ನೇ ಭೋಗಿಸುವನೊ ಆವನು ಪಾಪದಿಂದ ಮುಕ್ತನಾಗುವುದಿಲ್ಲ. '(ಅಜ್ಞಾನಿಯು ದೇವತೆಗಳಿಗೆ) ಪ್ರಯೋಜನವಾಗದ ಅನ್ನವನ್ನು ಪಡೆದರೆ (ಅದು ಆವನ ಮೃತ್ಯು)' ಮೋಘಮನ್ನಂ ವಿಂದತೇ ಎಂದು ಋಗ್ವೇದದಲ್ಲಿಯೂ (೧೦, ೧೧೭, ೬), 'ತನಗಾಗಿ ಅಡಿಗೆ ಮಾಡಕೂಡದು' ನಾತ್ಮಾರ್ಥಂ ಪಾಚಯೇದನ್ನಮ್ ಎಂದು ಮಹಾಭಾರತದಲ್ಲಿಯೂ (ಮೋಕ್ಷಧರ್ಮ, ೨೪೩, ೫) ಹೇಳಿದೆ. ಅನ್ನವು ಎಲ್ಲರಿಗೂ ಸೇರಿರುವುದರಿಂದ ತಾನೊಬ್ಬನೇ ತಿನ್ನಕೂಡದು ಎಂಬುದು ತಾತ್ಪರ್ಯ.

[2] ಅಮಾವಾಸ್ಯೆ ಪೂರ್ಣಿಮೆಗಳಲ್ಲಿ ಮಾಡುವ ಹೋಮಗಳು.

[3] ಯಾರಾದರೂ ಕರುವಿನ ವಯಸ್ಸನ್ನು ಕೇಳಿದಾಗ ಹೀಗೆ ಉತ್ತರಕೊಡುತ್ತಾರೆ.

[4] ಅಗ್ನಿಹೋತ್ರಕರ್ಮಕ್ಕೆ ಅತ್ಯಂತ ಆವಶ್ಯಕವಾಗಿರುವುದರಿಂದ. ಅಗ್ನಿಹೋತ್ರಾದಿ ಕರ್ಮಗಳಲ್ಲಿ ಕೊಡುವ ಆಹುತಿಯ ಪರಿಣಾಮವೇ ಸರ್ವಜಗತ್ತೆಂದು ನೂರಾರು ಶ್ರುತಿಸ್ಮೃತಿಗಳು ಹೇಳುತ್ತವೆ. ಹೀಗೆ ಪಯೋದ್ರವ್ಯವು ಎಲ್ಲಕ್ಕೂ ಪ್ರತಿಷ್ಠೆಯಾಗಿದೆ.

[5] ತನ್ನನ್ನು ಆಹುತಿಮಯನಾಗಿ ಮಾಡಿಕೊಂಡು ಸರ್ವದೇವತೆಗಳ ಅನ್ನರೂಪದಿಂದ ಸರ್ವದೇವತೆಗಳೊಡನೆ ಏಕಾತ್ಮಭಾವವನ್ನು ಪಡೆದು ಸರ್ವದೇವಮಯನಾಗಿ ಪುನಃ ಸಾಯುವುದಿಲ್ಲ.

[6] ಆವನು ಭೋಕ್ತೃವಾಗಿರುತ್ತಾನೆಯೇ ವಿನಾ ಭೋಜ್ಯತ್ವವನ್ನು ಹೊಂದುವುದಿಲ್ಲ.]

**'ತ್ರೀಣ್ಯಾತ್ಮನೇಽಕುರುತ' ಇತಿ ಮನೋ ವಾಚಂ ಪ್ರಾಣಂ, ತಾನ್ಯಾತ್ಮನೇಽಕುರುತ; 'ಅನ್ಯತ್ರಮನಾಅಭೂವಂ, ನಾದರ್ಶಮ್' 'ಅನ್ಯತ್ರಮನಾ ಅಭೂವಂ, ನಾಶ್ರೌಷಮ್' ಇತಿ, ಮನಸಾ ಹ್ಯೇವ ಪಶ್ಯತಿ, ಮನಸಾ ಶೃಣೋತಿ । ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ; ತಸ್ಮಾದಪಿ ಪೃಷ್ಠತ ಉಪಸ್ಪೃಷ್ಟೋ ಮನಸಾ ವಿಜಾನಾತಿ; ಯಃ ಕಶ್ಚ ಶಬ್ದೋ, ವಾಗೇವ ಸಾ । ಏಷಾ ಹ್ಯಂತಮಾಯತ್ತಾ, ಏಷಾ ಹಿ ನ; ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನೋಽನ ಇತ್ಯೇತತ್ ಸರ್ವಂ ಪ್ರಾಣ ಏವಂ; ಏತನ್ಮಯೋ ವಾ ಅಯಮಾತ್ಮಾ, ವಾಙ್ಮಯೋ ಮನೋಮಯಃ ಪ್ರಾಣಮಯಃ ॥ ೩ ॥**

ತ್ರೀಣಿ ಆತ್ಮನೇ ಅಕುರುತ ಇತಿ=ಎಂಬ [ಮಂತ್ರದ ಅರ್ಥ]: ಮನಃ=ಮನಸ್ಸನ್ನು ವಾಚಂ=ವಾಕ್ಕನ್ನು ಪ್ರಾಣಂ=ಪ್ರಾಣವನ್ನು ತಾನಿ=ಇವುಗಳನ್ನು ಆತ್ಮನೇ=ತನಗೆ ಅಕುರುತ=ಇಟ್ಟುಕೊಂಡನು, ಅನ್ಯತ್ರಮನಾಃ ಅಭೂವಂ=ನಾನು ಅನ್ಯಮನಸ್ಕನಾಗಿದ್ದೆನು, ನ ಅದರ್ಶಂ=ನಾನು ನೋಡಲಿಲ್ಲ, ಅನ್ಯತ್ರಮನಾಃ ಅಭೂವಂ=ನಾನು ಅನ್ಯಮನಸ್ಕನಾಗಿದ್ದೆನು, ನ ಅಶ್ರೌಷಂ=ನಾನು ಕೇಳಲಿಲ್ಲ ಇತಿ=ಎಂದು [ಹೇಳುತ್ತಾರೆ], ಮನಸಾ ಹಿ ಏವ=ಮನಸ್ಸಿನಿಂದಲೇ ಪಶ್ಯತಿ=ನೋಡುತ್ತಾನೆ. ಮನಸಾ=ಮನಸ್ಸಿನಿಂದ ಶೃಣೋತಿ=ಕೇಳುತ್ತಾನೆ. ಕಾಮಃ=ಕಾಮ ಸಂಕಲ್ಪಃ=ಸಂಕಲ್ಪ ವಿಚಿಕಿತ್ಸಾ=ಸಂದೇಹ ಶ್ರದ್ಧಾ=ಶ್ರದ್ಧೆ ಅಶ್ರದ್ಧಾ=ಅಶ್ರದ್ಧೆ ಧೃತಿಃ=ಧೃತಿ ಅಧೃತಿಃ=ಅಧೃತಿ ಹ್ರೀಃ=ಲಜ್ಜೆ ಧೀಃ=ಬುದ್ಧಿ ಭೀಃ=ಭಯ ಇತಿ ಏತತ್ ಸರ್ವಂ=ಹೀಗೆ ಇವೆಲ್ಲವೂ ಮನಃ ಏವ=ಮನಸ್ಸೇ, ತಸ್ಮಾತ್-ಆದುದರಿಂದ ಪೃಷ್ಠತಃ ಅಪಿ=ಹಿಂದಿನಿಂದ ಉಪಸ್ಪೃಷ್ಟಃ=ಮುಟ್ಟಲ್ಪಟ್ಟಾಗ ಮನಸಾ=ಮನಸ್ಸಿನಿಂದ ವಿಜಾನಾತಿ=ಅರಿಯುತ್ತಾನೆ. ಯಃ ಕಃ ಚ ಶಬ್ದಃ=ಯಾವ ವಿಧವಾದ ಶಬ್ದವೇ ಆಗಲಿ ಸಾ ವಾಕ್ ಏವ=ಅದು ವಾಕ್ಕೇ. ಹಿ=ಏಕೆಂದರೆ ಏಷಾ=ಅದು ಅಂತಂ ಆಯತ್ತಾ=ಅಂತವನ್ನು ಮುಟ್ಟುತ್ತದೆ, ಏಷಾ ಹಿ ನ=[ಆದರೆ] ಅದು ತನ್ನನ್ನು ಪ್ರಕಾಶಿಸಿಕೊಳ್ಳುವುದಿಲ್ಲ ಪ್ರಾಣಃ=ಪ್ರಾಣ ಅಪಾನಃ=ಅಪಾನ ವ್ಯಾನಃ=ವ್ಯಾನ ಉದಾನಃ=ಉದಾನ ಸಮಾನಃ=ಸಮಾನ ಅನಃ=ಅನ ಇತಿ ಏತತ್ ಸರ್ವಂ=ಇದೆಲ್ಲವೂ ಪ್ರಾಣಃ ಏವ=ಪ್ರಾಣವೇ, ಅಯಂ ಆತ್ಮಾ ವೈ=ಈ ಆತ್ಮನು ಏತನ್ಮಯಃ=ಇದೆಲ್ಲವೂ ಆಗಿದ್ದಾನೆ—ವಾಙ್ಮಯಃ=ವಾಙ್ಮಯನು ಮನೋಮಯಃ-ಮನೋಮಯನು ಪ್ರಾಣಮಯಃ=ಪ್ರಾಣಮಯನು

೩. 'ಮೂರನ್ನು ತನಗಾಗಿ ಇಟ್ಟುಕೊಂಡನು' ಎಂಬುದರ (ಅರ್ಥ): ಮನಸ್ಸು, ವಾಕ್ಕು, ಪ್ರಾಣ—ಇವುಗಳನ್ನು ತನಗಾಗಿ ಇಟ್ಟುಕೊಂಡನು. 'ನಾನು ಅನ್ಯಮನಸ್ಕನಾಗಿದ್ದೆನು, ನಾನು ನೋಡಲಿಲ್ಲ,' 'ನಾನು ಅನ್ಯಮನಸ್ಕನಾಗಿದ್ದೆನು, ನಾನು ಕೇಳಲಿಲ್ಲ' ಎಂದು (ಜನರು (ಹೇಳುತ್ತಾರೆ.) ಮನಸ್ಸಿನಿಂದಲೇ[1] ಎಲ್ಲರೂ ನೋಡುತ್ತಾರೆ ಮತ್ತು ಕೇಳುತ್ತಾರೆ: ಕಾಮ, ಸಂಕಲ್ಪ, ಸಂದೇಹ, ಶ್ರದ್ಧೆ,[2] ಅಶ್ರದ್ಧೆ, ಧೃತಿ,[3] ಅಧೃತಿ, ಲಜ್ಜೆ, ಬುದ್ಧಿ ಮತ್ತು ಭಯ — ಇವೆಲ್ಲವೂ ಮನಸ್ಸೇ ಆದುದರಿಂದ ಹಿಂದಿನಿಂದಲೂ ಯಾರಾದರೂ ಮುಟ್ಟಲ್ಪಟ್ಟರೆ ಅದನ್ನು ಮನಸ್ಸಿನಿಂದಲೇ ಅರಿಯುತ್ತಾನೆ. (ಇನ್ನು) ಯಾವ ವಿಧವಾದ ಶಬ್ದವೇ ಆಗಲಿ[4] ಅದು ವಾಕ್ಕೇ. ಏಕೆಂದರೆ ಅದು ಅಂತವನ್ನು ಮುಟ್ಟುತ್ತದೆ,[5] (ಆದರೆ) ಅದು ತನ್ನನ್ನು ಪ್ರಕಾಶಿಸಿಕೊಳ್ಳುವುದಿಲ್ಲ. ಪ್ರಾಣ,[6] ಅಪಾನ,[7] ವ್ಯಾನ,[8] ಉದಾನ,[9] ಸಮಾನ,[10] ಅನ[11]— ಇವೆಲ್ಲವೂ ಪ್ರಾಣವೇ. ಈ ಆತ್ಮನು[12] ಇವೆಲ್ಲವೂ ಆಗಿದ್ದಾನೆ.

ವಾಙ್ಮಯನು, ಮನೋಮಯನು ಮತ್ತು ಪ್ರಾಣಮಯನು.

[ಪಾಂಕ್ತಕರ್ಮದ ಫಲವೂ ಕಾರ್ಯವೂ ವಿಸ್ತೀರ್ಣವಿಷಯವುಳ್ಳದ್ದೂ ಆದ ಮೂರು ಅನ್ನಗಳು ಈ ಬ್ರಾಹ್ಮಣದ ಕೊನೆಯವರೆಗೂ ಹೇಳಲ್ಪಡುತ್ತವೆ

1 ಬಾಹ್ಯವಿಷಯದೊಂದಿಗೆ ಇಂದ್ರಿಯವು ಸಂಬಂಧವನ್ನು ಪಡೆದಿರುವಾಗಲೂ ಮನಸ್ಸಿನ ಸಹಾಯವಿಲ್ಲದಿದ್ದರೆ ವಸ್ತುಗ್ರಹಣವಾಗುವುದಿಲ್ಲ ಇದರಿಂದ ಸರ್ವಕರಣ ವಿಷಯಗಳ ಸಂಬಂಧವುಳ್ಳ ಮನಸ್ಸೆಂಬ ಅಂತಃಕರಣವು ಇದೇ ಎಂದು ಪ್ರಮಾಣ ವಾಗುತ್ತದೆ.

2 ಅದೃಷ್ಟಫಲವನ್ನು ಹೊಂದಲು ಮಾಡುವ ಕರ್ಮಗಳಲ್ಲಿ ಮತ್ತು ದೇವತಾದಿ ಗಳಲ್ಲಿ ಆಸ್ತಿಕ್ಯಬುದ್ಧಿ

3 ದೇಹಾದಿಗಳು ಕುಸಿದಾಗ ಹಿಡಿದೆತ್ತುವುದು.

4 ತಾಲು ಮೊದಲಾದುವುಗಳಲ್ಲಿ ವ್ಯಕ್ತವಾಗುವ ಧ್ವನಿಯಾಗಲಿ ಅಥವಾ ವಾದ್ಯ, ಮೇಘ ಮೊದಲಾದುವುಗಳಿಂದ ಉಂಟಾಗುವ ಧ್ವನಿಯಾಗಲಿ.

5 ಅಭಿಧೇಯವಸ್ತುವನ್ನು ನಿರ್ಣಯಿಸುತ್ತದೆ. ದೀಪದಂತೆ ವಾಕ್ಕು ಪ್ರಕಾಶವೇ ವಿನಾ ತಾನು ಪ್ರಕಾಶ್ಯವಲ್ಲ,

6 ಬಾಯಲ್ಲಿಯೂ ಮೂಗಿನಲ್ಲಿಯೂ ಸಂಚರಿಸುತ್ತಿರುವ ,ಹೃದಯವೃತ್ತಿ. ಮುಂದೆ ಬರುವುದರಿಂದ (ಪ್ರಣಯನಾತ್) ಪ್ರಾಣ ಎಂದೆನಿಸಿದೆ.

7 ಇದು ಹೃದಯದ ಕೆಳಗಿನಿಂದ ನಾಭಿಯವರೆಗೆ ಸಂಚರಿಸುತ್ತದೆ. ಮೂತ್ರ– ಪುರೀಷಗಳನ್ನು ಒಯ್ಯುವುದರಿಂದ ಅಪಾನವೆನಿಸಿದೆ.

8 ಇದು ಪ್ರಾಣಾಪಾನಗಳ ಸಂಧಿಯಾಗಿದ್ದು ಅವುಗಳ ಗತಿಯನ್ನು ನಿಯಮಿ ಸುತ್ತದೆ ಮತ್ತು ವೀರ್ಯದಿಂದ ಮಾಡುವ ಕರ್ಮಗಳಿಗೆ ಕಾರಣವಾಗಿರುತ್ತದೆ.

9 ಇದು ಉತ್ಕರ್ಷ,ಉದ್ಗಮನ ಮೊದಲಾದುವುಗಳಿಗೆ ಕಾರಣವಾಗಿದ್ದು ಅಂಗಾಲಿ ನಿಂದ ನೆತ್ತಿಯವರೆಗೆ ಊರ್ಧ್ವವೃತ್ತಿಯುಳ್ಳದ್ದಾಗಿರುತ್ತದೆ.

10 ಇದು ತಿಂದುದನ್ನೂ ಕುಡಿದುದನ್ನೂ ಸಮಾನವಾಗಿ ಒಯ್ಯುವುದರಿಂದ ಸಮಾನ ವೆನಿಸಿದೆ. ಇದು ಹೊಟ್ಟೆಯಲ್ಲಿದ್ದು ಅನ್ನವನ್ನು ಪಚನಮಾಡುತ್ತದೆ.

11 ಇದು ಈ ವೃತ್ತಿವಿಶೇಷಗಳಿಗೆ ಸಾಮಾನ್ಯವಾಗಿದ್ದು ದೇಹದ ಸಾಮಾನ್ಯ ವ್ಯಾಪಾರಕ್ಕೆ ಸಂಬಂಧಪಟ್ಟಿದೆ.

12 ಕಾರ್ಯ–ಕರಣ–ಸಂಘಾತವಾದ ಶರೀರ. ಇದನ್ನೇ ಅವಿವೇಕಿಗಳು ಆತ್ಮ ಎಂದು ತಿಳಿಯುತ್ತಾರೆ.]

**ತ್ರಯೋ ಲೋಕಾ ಏತ ಏವ; ವಾಗೇವಾಯಂ ಲೋಕಃ, ಮನೋಽಂತರಿಕ್ಷಲೋಕಃ, ಪ್ರಾಣೋಽಸೌ ಲೋಕಃ ॥ ೪ ॥**

ಏತೇ ಏವ=ಇವೇ ತ್ರಯಃ=ಮೂರು ಲೋಕಾಃ=ಲೋಕಗಳು, ವಾಕ್ ಏವ=ವಾಕ್ಕೇ ಅಯಂ ಲೋಕಃ=ಈ ಲೋಕವು, ಮನಃ=ಮನಸ್ಸು ಅಂತರಿಕ್ಷಲೋಕಃ=ಅಂತರಿಕ್ಷಲೋಕ, ಪ್ರಾಣಃ=ಪ್ರಾಣವು ಅಸೌ ಲೋಕಃ=ಆ ಲೋಕವು.

ಇವೇ ಮೂರು ಲೋಕಗಳು: ವಾಕ್ಕೇ ಈ ಲೋಕ, ಮನಸ್ಸು ಅಂತರಿಕ್ಷಲೋಕ, ಪ್ರಾಣವು ಆ ಲೋಕ (ದ್ಯುಲೋಕ ಅಥವಾ ಸ್ವರ್ಗ).

[ಮನೋವಾಕ್‌ಪ್ರಾಣಗಳೆಂಬ ಆಧ್ಯಾತ್ಮಿಕವಾದ ಅನ್ನಗಳನ್ನು ಹಿಂದೆ ವಿವರಿಸಿದ್ದಾಯಿತು. ಈಗ ಅದೇ ಪ್ರಾಜಾಪತ್ಯವಾದ ಮೂರು ಅನ್ನಗಳ ಆಧಿಭೌತಿಕವಿಸ್ತಾರವನ್ನು ಹೇಳಿದೆ.]

**ತ್ರಯೋ ವೇದಾ ಏತ ಏವ; ವಾಗೇವ ಋಗ್ವೇದಃ, ಮನೋ ಯಜುರ್ವೇದಃ, ಪ್ರಾಣಃ ಸಾಮವೇದಃ ॥ ೫ ॥**

ಏತೇ ಏವ=ಇವೇ ತ್ರಯಃ ವೇದಾಃ=ಮೂರು ವೇದಗಳು; ವಾಕ್ ಏವ=ವಾಕ್ಕೇ ಋಗ್ವೇದಃ=ಋಗ್ವೇದ, ಮನಃ=ಮನಸ್ಸು ಯಜುರ್ವೇದಃ=ಯಜುರ್ವೇದ, ಪ್ರಾಣಃ=ಪ್ರಾಣವು ಸಾಮವೇದಃ=ಸಾಮವೇದ.

5 ಇವೇ ಮೂರು ವೇದಗಳು: ವಾಕ್ಕೇ ಋಗ್ವೇದ, ಮನಸ್ಸು ಯಜುರ್ವೇದ, ಪ್ರಾಣವು ಸಾಮವೇದ.

**ದೇವಾಃ ಪಿತರೋ ಮನುಷ್ಯಾ ಏತ ಏವ; ವಾಗೇವ ದೇವಾಃ, ಮನಃ ಪಿತರಃ, ಪ್ರಾಣೋ ಮನುಷ್ಯಾಃ ॥ ೬ ॥**

ಏತೇ ಏವ=ಇವೇ ದೇವಾಃ=ದೇವತೆಗಳು ಪಿತರಃ=ಪಿತೃಗಳು, ಮನುಷ್ಯಾಃ=ಮನುಷ್ಯರು; ವಾಕ್ ಏವ=ವಾಕ್ಕೇ ದೇವಾಃ=ದೇವತೆಗಳು, ಮನಃ=ಮನಸ್ಸು ಪಿತರಃ=ಪಿತೃಗಳು, ಪ್ರಾಣಃ=ಪ್ರಾಣವು ಮನುಷ್ಯಾಃ=ಮನುಷ್ಯರು.

೬. ಇವೇ ದೇವತೆಗಳು ಪಿತೃಗಳು ಮನುಷ್ಯರು, ವಾಕ್ಕೇ ದೇವತೆಗಳು, ಮನಸ್ಸು ಪಿತೃಗಳು, ಪ್ರಾಣವು ಮನುಷ್ಯರು.

**ಪಿತಾ ಮಾತಾ ಪ್ರಜೈತ ಏವ; ಮನ ಏವ ಪಿತಾ, ವಾಙ್ಮಾತಾ, ಪ್ರಾಣಃ ಪ್ರಜಾ ॥ ೭ ॥**

ಏತೇ ಏವ=ಇವೇ ಪಿತಾ=ತಂದೆ, ಮಾತಾ=ತಾಯಿ, ಪ್ರಜಾ=ಸಂತತಿ; ಮನಃ ಏವ=ಮನಸ್ಸೇ ಪಿತಾ=ತಂದೆ, ವಾಕ್=ವಾಕ್ಕು, ಮಾತಾ=ತಾಯಿ, ಪ್ರಾಣಃ=ಪ್ರಾಣವು, ಪ್ರಜಾ=ಸಂತತಿ.

೭. ಇವೇ ತಂದೆ ತಾಯಿ ಮತ್ತು ಸಂತತಿ. ಮನಸ್ಸೇ ತಂದೆ, ವಾಕ್ಕು ತಾಯಿ, ಪ್ರಾಣವು ಸಂತತಿ.

**ವಿಜ್ಞಾತಂ ವಿಜಿಜ್ಞಾಸ್ಯಮವಿಜ್ಞಾತಮೇತ ಏವ; ಯತ್ಕಿಂಚ ವಿಜ್ಞಾತಂ ವಾಚಸ್ತದ್ರೂಪಂ ವಾಗ್ಘಿ ವಿಜ್ಞಾತಾ; ವಾಗೇನಂ ತದ್ಭೂತ್ವಾವತಿ ॥ ೮ ॥**

ಏತೇ ಏವ=ಇವೇ ವಿಜ್ಞಾತಂ=ಅರಿಯಲ್ಪಟ್ಟದ್ದು, ವಿಜಿಜ್ಞಾಸ್ಯಂ=ಅರಿಯಲ್ಪಡಬೇಕಾದುದು ಅವಿಜ್ಞಾತಂ=ಅರಿಯಲ್ಪಡದಿರುವುದು ; ಯತ್ ಕಿಂಚ ವಿಜ್ಞಾತಂ= ಯಾವಯಾವುದು ಅರಿಯಲ್ಪಟ್ಟಿರುವುದೊ ತತ್=ಅದು ವಾಚಃ=ವಾಕ್ಕಿನ ರೂಪಂ= ರೂಪವು ; ಹಿ=ಏಕೆಂದರೆ ವಾಕ್=ವಾಕ್ಕು ವಿಜ್ಞಾತಾ=ಜ್ಞಾತೃವು; ವಾಕ್=ವಾಕ್ಕು ಏನಂ=ಇವನನ್ನು ತತ್ ಭೂತ್ವಾ=ಅದು ಆಗಿ ಅವತಿ=ಕಾಪಾಡುತ್ತದೆ.

೮. ಇವೇ ಅರಿಯಲ್ಪಟ್ಟದ್ದು, ಅರಿಯಲ್ಪಡಬೇಕಾದುದು ಮತ್ತು ಅರಿಯಲ್ಪಡದಿರುವುದು. ಯಾವಯಾವುದು ಅರಿಯಲ್ಪಟ್ಟಿರುವುದೊ ಅದು ವಾಕ್ಕಿನ ರೂಪ ; ಏಕೆಂದರೆ ಅದು ಜ್ಞಾತೃವಾಗಿದೆ.[1] ವಾಕ್ಕು ಇದನ್ನು ಅರಿತಿರುವವನನ್ನು ಅದೇ ಆಗಿ[2] ಕಾಪಾಡುತ್ತದೆ.

[೧ ಪ್ರಕಾಶಾತ್ಮಕವಾಗಿರುವುದರಿಂದ ವಸ್ತುಗಳನ್ನು ಬೆಳಗುತ್ತದೆ.
೨ ಅರಿಯಲ್ಪಟ್ಟದ್ದಾಗಿ ; ಎಂದರೆ ವಾಕ್ಕು ವಿಜ್ಞಾತರೂಪದಿಂದ ಇವನಿಗೆ ಅನ್ನವಾಗುತ್ತದೆ ಅಥವಾ ಭೋಜ್ಯವಾಗುತ್ತದೆ.]

**ಯತ್ಕಿಂಚ ವಿಜಿಜ್ಞಾಸ್ಯಂ ಮನಸಸ್ತದ್ರೂಪಂ, ಮನೋ ಹಿ ವಿಜಿಜ್ಞಾಸ್ಯಂ; ಮನ ಏನಂ ತದ್ಭೂತ್ವಾವತಿ ॥ ೯ ॥**

ಯತ್ ಕಿಂಚ ವಿಜಿಜ್ಞಾಸ್ಯಂ=ಯಾವಯಾವದು ಅರಿಯಲ್ಪಡಬೇಕಾದುದೊ ತತ್=ಅದು ಮನಸಃ=ಮನಸ್ಸಿನ ರೂಪಂ ರೂಪವು ಹಿ=ಏಕೆಂದರೆ ಮನಃ= ಮನಸ್ಸು ವಿಜಿಜ್ಞಾಸ್ಯಂ=ಅರಿಯಲ್ಪಡಬೇಕಾದುದು ; ಮನಃ ಏನಂ ತತ್ ಭೂತ್ವಾ ಅವತಿ=ಮನಸ್ಸು ಅವನನ್ನು ಅದು ಆಗಿ ಕಾಪಾಡುತ್ತದೆ.

೯. ಯಾವಯಾವುದು ಅರಿಯಲ್ಪಡಬೇಕಾಗಿರುವುದೊ ಅದು ಮನಸ್ಸಿನ ರೂಪ ; ಏಕೆಂದರೆ ಮನಸ್ಸು ಅರಿಯಲ್ಪಡಬೇಕಾಗಿರುವುದು. ಮನಸ್ಸು ಇದನ್ನು ಅರಿತಿರುವವನನ್ನು ಅದೇ ಆಗಿ[1] ಕಾಪಾಡುತ್ತದೆ.

[೧ ಮನಸ್ಸು ವಿಜಿಜ್ಞಾಸ್ಯರೂಪದಿಂದ ಇವನಿಗೆ ಅನ್ನವಾಗುತ್ತದೆ.]

**ಯತ್ಕಿಂಚಾವಿಜ್ಞಾತಂ ಪ್ರಾಣಸ್ಯ ತದ್ರೂಪಂ, ಪ್ರಾಣೋ ಹ್ಯವಿಜ್ಞಾತಃ; ಪ್ರಾಣ ಏನಂ ತದ್ಭೂತ್ವಾವತಿ ॥ ೧೦ ॥**

ಯತ್ ಕಿಂಚ ಅವಿಜ್ಞಾತಂ=ಯಾವಯಾವುದು ಅರಿಯದಿರುವುದೊ ತತ್=ಅದು ಪ್ರಾಣಸ್ಯ=ಪ್ರಾಣದ ರೂಪಂ=ರೂಪವು, ಹಿ=ಏಕೆಂದರೆ ಪ್ರಾಣಃ=ಪ್ರಾಣವು ಅವಿಜ್ಞಾತಃ=ಅರಿಯಲ್ಪಡದಿರುವುದು; ಪ್ರಾಣಃ ಏನಂ ತತ್ ಭೂತ್ವಾ ಅವತಿ.

೧೦. ಯಾವಯಾವುದು ಅರಿಯಲ್ಪಡದಿರುವುದೋ ಅದು ಪ್ರಾಣದ ರೂಪ, ಏಕೆಂದರೆ ಅದು ಅರಿಯಲ್ಪಡದೆ ಇರುವುದು. ಪ್ರಾಣವು ಇದನ್ನು ಅರಿತಿರುವವನನ್ನು ಅದೇ ಆಗಿ[1] ಕಾಪಾಡುತ್ತದೆ.

[೧ ಪ್ರಾಣವು ಅವಿಜ್ಞಾತರೂಪದಿಂದ ಇವನಿಗೆ ಅನ್ನವಾಗುತ್ತದೆ]

**ತಸ್ಯೈ ವಾಚಃ ಪೃಥಿವೀ ಶರೀರಂ, ಜ್ಯೋತೀರೂಪಮಯ-ಮಗ್ನಿಃ, ತದ್ಯಾವತ್ಯೇವ ವಾಕ್, ತಾವತೀ ಪೃಥಿವೀ, ತಾವಾನಯ-ಮಗ್ನಿಃ ॥ ೧೧ ॥**

[ತಸ್ಯೈ ತಸ್ಯಾಃ] ವಾಚಃ=ಆ ವಾಕ್ಕಿಗೆ ಪೃಥಿವೀ=ಪೃಥ್ವಿಯು ಶರೀರಂ=ಶರೀರವು, ಅಯಂ ಅಗ್ನಿಃ=ಈ ಅಗ್ನಿಯು ಜ್ಯೋತೀರೂಪಂ=ಜ್ಯೋತೀರೂಪವು; ತತ್=ಇಲ್ಲಿ ವಾಕ್ ಯಾವತೀ ಏವ=ವಾಕ್ಕು ಎಷ್ಟೋ ಪೃಥಿವೀ ತಾವತೀ=ಪೃಥ್ವಿಯು ಅಷ್ಟು, ಅಯಂ ಅಗ್ನಿಃ-ಈ ಅಗ್ನಿಯು ತಾವಾನ್-ಅಷ್ಟು.

೧೧. ಆ ವಾಕ್ಕಿಗೆ ಪೃಥ್ವಿಯು ಶರೀರವು, ಈ ಅಗ್ನಿಯೇ ಜ್ಯೋತೀ-ರೂಪವು.[1] ಇಲ್ಲಿ ವಾಕ್ಕು ಎಷ್ಟೋ, ಪೃಥ್ವಿಯು ಅಷ್ಟು, ಈ ಅಗ್ನಿಯೂ ಅಷ್ಟು.

ವಾಙ್ಮನಃಪ್ರಾಣಗಳ ಆಧಿಭೌತಿಕ ವಿಸ್ತಾರವನ್ನು ಹೇಳಿದ್ದಾಯಿತು. ಈಗ ಈ ಮೂರು ಮಂತ್ರಗಳಲ್ಲಿ ಆಧಿದೈವಿಕವಿಸ್ತಾರವನ್ನು ವಿವರಿಸಿದೆ.

1 ಈ ಪ್ರಜಾಪತಿಯ ಅನ್ನವಾದ ವಾಕ್ಕಿಗೆ ಪೃಥ್ವಿಯು ಹೊರಗಿನ ಆಧಾರವು. ಈ ಪಾರ್ಥಿವಾಗ್ನಿಯು ಪ್ರಕಾಶಾತ್ಮಕವಾದ ಕರಣವು ಮತ್ತು ಆಧೇಯವು. ಪ್ರಜಾಪತಿಯ ವಾಕ್ಕೆಂಬುದು ಆಧಾರವೂ ಅಪ್ರಕಾಶವೂ ಆದ ಕಾರ್ಯವಾಗಿಯೂ, ಆಧೇಯವೂ ಪ್ರಕಾಶವೂ ಆದ ಕರಣವಾಗಿಯೂ ಎರಡು ವಿಧವಾಗಿದೆ.

2 ಅಧ್ಯಾತ್ಮ, ಅಧಿಭೂತ ಎಂಬ ಭೇದಗಳಿಂದ ವಿಂಗಡವಾಗಿರುವ ವಾಕ್ಕು ಎಷ್ಟು ಪರಿಣಾಮವುಳ್ಳದ್ದಾಗಿದೆಯೊ ಅದರ ಕಾರ್ಯವೂ ಆಧಾರವೂ ಆಗಿರುವ ಪೃಥ್ವಿಯು

ಅಷ್ಟೇ ಪರಿಮಾಣವುಳ್ಳದ್ದಾಗಿದೆ, ಆದರ ಆಧೇಯವೂ ಕರಣವೂ ಆದ ಈ ಅಗ್ನಿಯು ಜ್ಯೋತೀರೂಪದಿಂದ ಪೃಥ್ವಿಯನ್ನು ಪ್ರವೇಶಿಸಿ ಅಷ್ಟೇ ಪರಿಮಾಣವುಳ್ಳದ್ದಾಗಿದೆ.)

**ಅಥೈತಸ್ಯ ಮನಸೋ ದ್ಯೌಃ ಶರೀರಂ, ಜ್ಯೋತೀರೂಪಮಸಾ-ವಾದಿತ್ಯಃ ; ತದ್ಯಾವದೇವ ಮನಃ, ತಾವತೀ ದ್ಯೌಃ, ತಾವಾನಸಾ-ವಾದಿತ್ಯಃ ; ತೌ ಮಿಥುನಂ ಸಮೈತಾಂ, ತತಃ ಪ್ರಾಣೋಽಜಾ-ಯತ ; ಸ ಇಂದ್ರಃ, ಸ ಏಷೋಽಸಪತ್ನಃ, ದ್ವಿತೀಯೋ ವೈ ಸಪತ್ನಃ, ನಾಸ್ಯ ಸಪತ್ನೋ ಭವತಿ ಯ ಏವಂ ವೇದ ॥ ೧೨ ॥**

ಅಥ=ಇನ್ನು ಏತಸ್ಯ ಮನಸಃ=ಈ ಮನಸ್ಸಿಗೆ ದ್ಯೌಃ=ದ್ಯುಲೋಕವು ಶರೀರಂ= ಶರೀರವು, ಅಸೌ ಆದಿತ್ಯಃ=ಆ ಆದಿತ್ಯನು ಜ್ಯೋತೀರೂಪಂ=ಜ್ಯೋತೀರೂಪನು ; ತತ್ ಮನಃ ಯಾವತ್ ಏವ, ದ್ಯೌಃ ತಾವತೀ ಏವ, ಅಸೌ ಆದಿತ್ಯಃ ತಾವಾನ್ ; ತೌ=ಅವರಿಬ್ಬರುಮಿಥುನಂ ಸಮೇತಾಂ=ಮಿಥುನವನ್ನು ಹೊಂದಿದರು,ತತಃ=ಅದರಿಂದ ಪ್ರಾಣಃ=ಪ್ರಾಣನು ಅಜಾಯತ=ಹುಟ್ಟಿದನು ; ಸಃ ಇಂದ್ರಃ=ಅವನು ಇಂದ್ರನು, ಸಃ ಏಷಃ=ಆ ಇವನು ಅಸಪತ್ನಃ=ಪ್ರತಿಪಕ್ಷವಿಲ್ಲದವನು—ದ್ವಿತೀಯಃ ವೈ=ಎರಡನೆಯವನೇ ಸಪತ್ನಃ=ಪ್ರತಿಪಕ್ಷಿಯು ; ಯಃ ಏವಂ ವೇದ=ಯಾವನು ಹೀಗೆ ಅರಿತುಕೊಳ್ಳುವನೊ ಅಸ್ಯ=ಅವನಿಗೆ ಸಪತ್ನಃ ನ ಭವತಿ=ಪ್ರತಿಪಕ್ಷಿಯು ಇರುವುದಿಲ್ಲ.

೧೨. ಇನ್ನು ಈ ಮನಸ್ಸಿಗೆ ದ್ಯುಲೋಕವು ಶರೀರ, ಆ ಆದಿತ್ಯನು ಜ್ಯೋತೀರೂಪ. ಅಲ್ಲಿ ಮನಸ್ಸು ಎಷ್ಟು ಪರಿಮಾಣವುಳ್ಳದ್ದೊ ದ್ಯುಲೋಕವೂ ಅಷ್ಟೇ ಪರಿಮಾಣವುಳ್ಳದ್ದು ಮತ್ತು ಆದಿತ್ಯನೂ ಅಷ್ಟೇ ಪರಿಮಾಣವುಳ್ಳವನು. ಅವರಿಬ್ಬರೂ ಮಿಥುನವನ್ನು ಹೊಂದಿದರು.[1] ಅದರಿಂದ ಪ್ರಾಣನು ಹುಟ್ಟಿದನು.[2] ಅವನು ಇಂದ್ರನು.[3] ಆ ಇವನು ಪ್ರತಿಪಕ್ಷವಿಲ್ಲದವನು ;[4] ಏಕೆಂದರೆ ಎರಡನೆಯವನಿದ್ದರೆ ಪ್ರತಿಪಕ್ಷವಾಗುವುದಲ್ಲವೆ ? ಯಾವನು ಹೀಗೆ ಅರಿತುಕೊಳ್ಳುವನೊ ಅವನಿಗೆ ಪ್ರತಿಪಕ್ಷಿಯಿರುವುದಿಲ್ಲ.

[1 ಆ ಅಗ್ನಿ-ಆದಿತ್ಯ, ಅಧಿದೈವಿಕ-ವಾಙ್ಮನಸ್ಸುಗಳಾದ ತಾಯಿತಂದೆಗಳು.

2 ವಾಯುವು ಪರಿಸ್ಪಂದರೂಪವಾದ ಕರ್ಮಕ್ಕಾಗಿ ಜನಿಸಿದನು.

3 ಸ್ವತಂತ್ರವಾದ ಶಕ್ತಿಯುಳ್ಳವನು.

4 ವಾಙ್ಮನಸ್ಸುಗಳು ಎರಡನೆಯ ವಸ್ತುವಾದರೂ ಪ್ರಾಣಕ್ಕೆ ಅಧೀನವಾಗಿರುವುದರಿಂದ ಪ್ರತಿಪಕ್ಷಿಗಳಾಗುವುದಿಲ್ಲ.]

**ಅಥೈತಸ್ಯ ಪ್ರಾಣಸ್ಯಾಪಃ ಶರೀರಂ, ಜ್ಯೋತೀರೂಪಮಸೌ ಚಂದ್ರಃ; ತದ್ಯಾವಾನೇವ ಪ್ರಾಣಃ, ತಾವತ್ಯ ಆಪಃ, ತಾವಾನಸೌ ಚಂದ್ರಃ, ತ ಏತೇ ಸರ್ವ ಏವ ಸಮಾಃ, ಸರ್ವೇಽನಂತಾಃ, ಸ ಯೋ ಹೈತಾನಂತವತ ಉಪಾಸ್ತೇಽಂತವಂತಂ ಸ ಲೋಕಂ ಜಯತಿ; ಅಥ ಯೋ ಹೈತಾನನಂತಾನುಪಾಸ್ತೇಽನಂತಂ ಸ ಲೋಕಂ ಜಯತಿ ‖ ೧೩ ‖**

ಅಥ=ಇನ್ನು ಏತಸ್ಯ ಪ್ರಾಣಸ್ಯ=ಈ ಪ್ರಾಣಕ್ಕೆ ಆಪಃ=ನೀರು ಶರೀರಂ, ಅಸೌ ಚಂದ್ರಃ ಜ್ಯೋತೀರೂಪಂ; ತತ್ ಪ್ರಾಣಃ ಯಾವಾನ್ ಏವ, ಆಪಃ ತಾವತ್ಯಃ, ಅಸೌ ಚಂದ್ರಃ ತಾವಾನ್; ತೇ ಏತೇ ಸರ್ವೇ ಏವ=ಆ ಇವೆಲ್ಲವೂ ಸಮಾಃ=ಸಮವಾಗಿವೆ, ಸರ್ವೇ ಅನಂತಾಃ=ಎಲ್ಲವೂ ಅನಂತವಾಗಿವೆ; ಸಃ ಯಃ ಹ=ಆ ಯಾವನು ಏತಾನ್=ಇವುಗಳನ್ನು ಅಂತವತಃ=ಅಂತವುಳ್ಳವುಗಳೆಂದು ಉಪಾಸ್ತೇ=ಉಪಾಸಿಸುತ್ತಾನೆಯೊ ಸಃ=ಅವನು ಅಂತವಂತಂ=ಅಂತವುಳ್ಳ ಲೋಕಂ=ಲೋಕವನ್ನು ಜಯತಿ=ಜಯಿಸಿಕೊಳ್ಳುತ್ತಾನೆ; ಅಥ=ಆದರೆ ಯಃ ಹ=ಯಾವನು ಏತಾನ್=ಇವನ್ನು ಅನಂತಾನ್=ಅನಂತಗಳೆಂದು ಉಪಾಸ್ತೇ=ಉಪಾಸಿಸುತ್ತಾನೆಯೊ ಸಃ=ಅವನು ಅನಂತಂ ಲೋಕಂ=ಅನಂತವಾದ ಲೋಕವನ್ನು ಜಯತಿ=ಜಯಿಸಿಕೊಳ್ಳುತ್ತಾನೆ.

೧೩. ಇನ್ನು ಈ ಪ್ರಾಣಕ್ಕೆ[1] ನೀರು ಶರೀರ, ಆ ಚಂದ್ರನು ಜ್ಯೋತೀರೂಪ. ಅಲ್ಲಿ ಪ್ರಾಣನು ಎಷ್ಟು ಪರಿಮಾಣವುಳ್ಳವನೊ ನೀರೂ ಅಷ್ಟೇ ಪರಿಮಾಣವುಳ್ಳದ್ದು ಮತ್ತು ಚಂದ್ರನೂ ಅಷ್ಟೇ ಪರಿಮಾಣವುಳ್ಳವನು. ಆ ಇವೆಲ್ಲವೂ[2] ಸಮವಾಗಿವೆ, ಎಲ್ಲವೂ ಅನಂತವಾಗಿವೆ[3] ಯಾವನು ಇವನ್ನು[4] ಅಂತವುಳ್ಳವುಗಳೆಂದು[5] ಉಪಾಸಿಸುತ್ತಾನೆಯೊ ಅವನು ಅಂತವುಳ್ಳ ಲೋಕವನ್ನು ಜಯಿಸಿಕೊಳ್ಳುತ್ತಾನೆ; ಯಾವನು ಇವನ್ನು ಅನಂತವೆಂದು ಉಪಾಸಿಸುತ್ತಾನೆಯೊ ಅವನು ಅನಂತವಾದ ಲೋಕವನ್ನು ಜಯಿಸಿಕೊಳ್ಳುತ್ತಾನೆ.

[[1] ಪ್ರಜಾಪತಿಯ ಅನ್ನವಾದ ಪ್ರಾಣಕ್ಕೆ, ಅಗ್ನ್ಯಾದಿತ್ಯರ ಸಂತಾನವಾದ ಪ್ರಾಣಕ್ಕಲ್ಲ.

[2] ವಾಙ್ಮನಃಪ್ರಾಣಗಳು; ಇವು ಇಡಿಯ ಜಗತ್ತನ್ನು ವ್ಯಾಪಿಸಿಕೊಂಡಿವೆ.

[3] ಅಧ್ಯಾತ್ಮಾಧಿಭೂತಗಳೊಂದಿಗೆ ವ್ಯಾಪಿಸಿಕೊಂಡಿರುವುದರಿಂದ ಅನಂತವಾಗಿವೆ. ಇವು ಸಂಸಾರವಿರುವವರೆಗೆ ಇರುತ್ತವೆ.

[4] ಪ್ರಜಾಪತಿಯ ಆತ್ಮಭೂತವಾದ ಈ ಅನ್ನಗಳನ್ನು.

[5] ಪರಿಚ್ಛಿನ್ನವೆಂದು.]

ಸ ಏಷ ಸಂವತ್ಸರಃ ಪ್ರಜಾಪತಿಃ ಷೋಡಶಕಲಃ, ತಸ್ಯ ರಾತ್ರಯ ಏವ ಪಂಚದಶ ಕಲಾಃ, ಧ್ರುವೈವಾಸ್ಯ ಷೋಡಶೀ ಕಲಾ ; ಸ ರಾತ್ರಿಭಿರೇವಾ ಚ ಪೂರ್ಯತೇಽಪ ಚ ಕ್ಷೀಯತೇ ; ಸೋಽಮಾವಾಸ್ಯಾಂ ರಾತ್ರಿಮೇತಯಾ ಷೋಡಶ್ಯಾ ಕಲಯಾ ಸರ್ವಮಿದಂ ಪ್ರಾಣಭೃದನುಪ್ರವಿಶ್ಯ ತತಃ ಪ್ರಾತರ್ಜಾಯತೇ ; ತಸ್ಮಾದೇತಾಂ ರಾತ್ರಿಂ ಪ್ರಾಣಭೃತಃ ಪ್ರಾಣಂ ನ ವಿಚ್ಛಿಂದ್ಯಾತ್, ಅಪಿ ಕೃಕಲಾಸಸ್ಯ, ಏತಸ್ಯಾ ಏವ ದೇವತಾಯಾ ಅಪಚಿತ್ಯೈ ॥ ೧೪ ॥

ಸಃ ಏಷಃ=ಆ ಈ ಸಂವತ್ಸರಃ=ಕಾಲರೂಪನಾದ ಪ್ರಜಾಪತಿಃ=ಪ್ರಜಾಪತಿಯು ಅಥವಾ ಹಿರಣ್ಯಗರ್ಭನು ಷೋಡಶಕಲಃ=ಹದಿನಾರು ಕಲೆಗಳುಳ್ಳವನು ; ತಸ್ಯ=ಅವನಿಗೆ ರಾತ್ರಯಃ ಏವ=ರಾತ್ರಿಗಳೇ ಪಂಚದಶ ಕಲಾಃ=ಹದಿನೈದು ಕಲೆಗಳು ; ಅಸ್ಯ=ಇವನ ಷೋಡಶೀ ಕಲಾ=ಹದಿನಾರನೆಯ ಕಲೆಯು ಧ್ರುವಾ ಏವ=ನಿತ್ಯವಾಗಿಯೇ ಇದೆ ; ಸಃ=ಅವನು ರಾತ್ರಿಭಿಃ ಏವ=ರಾತ್ರಿಗಳಿಂದಲೇ ಆಪೂರ್ಯತೇ ಚ=ವೃದ್ಧಿಯಾಗುತ್ತಾನೆ ಅಪಕ್ಷೀಯತೇ ಚ=ಕ್ಷೀಣನಾಗುತ್ತಾನೆ ; ಸಃ=ಅವನು ಅಮಾವಾಸ್ಯಾಂ=ಅಮಾವಾಸ್ಯೆಯ ರಾತ್ರಿಂ=ರಾತ್ರಿಯಲ್ಲಿ ಏತಯಾ ಷೋಡಶ್ಯಾ ಕಲಯಾ=ಈ ಹದಿನಾರನೆಯ ಕಲೆಯಿಂದ ಇದಂ ಸರ್ವಂ ಪ್ರಾಣಭೃತ್=ಈ ಪ್ರಾಣಿಸಮೂಹವನ್ನೆಲ್ಲ ಅನುಪ್ರವಿಸ್ಯ=ಪ್ರವೇಶಿಸಿ ತತಃ ಪ್ರಾತಃ=ಮರುದಿನ ಬೆಳಗ್ಗೆ ಜಾಯತೇ=ಹುಟ್ಟುತ್ತಾನೆ ; ತಸ್ಮಾತ್=ಆದುದರಿಂದ ಏತಸ್ಯಾಃ ಏವ ದೇವತಾಯಾಃ=ಈ ಸೋಮದೇವತೆಯ ಅಪಚಿತ್ಯೈ=ಪೂಜೆಗಾಗಿ, ಗೌರವಕ್ಕಾಗಿ ಏತಾಂ ರಾತ್ರಿಂ=ಈ ರಾತ್ರಿಯಲ್ಲಿ ಪ್ರಾಣಭೃತಃ=ಪ್ರಾಣಿಯ ಪ್ರಾಣಂ=ಪ್ರಾಣವನ್ನು ನ ವಿಚ್ಛಿಂದ್ಯಾತ್=ತೆಗೆಯಕೂಡದು, ಕೃಕಲಾಸಸ್ಯ ಅಪಿ=ಓತಿಯ [ಪ್ರಾಣವನ್ನೂ ತೆಗೆಯಕೂಡದು].

೧೪. ಆ ಈ ಕಾಲರೂಪನಾದ ಪ್ರಜಾಪತಿಯು (ಹಿರಣ್ಯಗರ್ಭನು) ಹದಿನಾರು ಕಲೆಗಳುಳ್ಳವನು. ಅವನಿಗೆ ರಾತ್ರಿಗಳೇ[1] ಹದಿನೈದು ಕಲೆಗಳು. ಅವನ ಹದಿನಾರನೆಯ ಕಲೆಯು ನಿತ್ಯವಾಗಿಯೇ ಇದೆ. ಅವನು[2] ರಾತ್ರಿಗಳಿಂದಲೇ ವೃದ್ಧಿಯಾಗುತ್ತಾನೆ ಮತ್ತು ಕ್ಷೀಣನಾಗುತ್ತಾನೆ. ಅವನು ಅಮಾವಾಸ್ಯೆಯ ರಾತ್ರಿ ಈ ಹದಿನಾರನೆಯ ಕಲೆಯಿಂದ ಈ ಎಲ್ಲ ಪ್ರಾಣಿಸಮೂಹವನ್ನು ಪ್ರವೇಶಿಸಿ[3] ಮರುದಿನ ಬೆಳಗ್ಗೆ ಹುಟ್ಟುತ್ತಾನೆ.[4] ಆದುದರಿಂದ ಈ (ಸೋಮ) ದೇವತೆಯ ಗೌರವಕ್ಕಾಗಿ ಈ ರಾತ್ರಿಯಲ್ಲಿ ಪ್ರಾಣಿಯ ಪ್ರಾಣವನ್ನು ತೆಗೆಯಕೂಡದು, ಓತಿಯ[5] (ಪ್ರಾಣವನ್ನೂ ಕೂಡ ತೆಗೆಯಕೂಡದು).

[[1] ತಿಥಿಗಳು.

[2] ಚಂದ್ರರೂಪನಾದ ಪ್ರಜಾಪತಿಯು.

[3] ಜಲರೂಪದಿಂದಲೂ ಸಸ್ಯರೂಪದಿಂದಲೂ ವ್ಯಾಪಿಸಿಕೊಂಡು.

[4] ಹೀಗೆ ಪ್ರಜಾಪತಿಯು ಅಮೃತಸ್ವರೂಪನು, ದ್ಯುಲೋಕ, ಆದಿತ್ಯ, ಮನಸ್ಸು-ಇವು ತಂದೆ; ಪೃಥ್ವಿ, ಅಗ್ನಿ, ವಾಕ್ಕು—ಇವು ತಾಯಿ. ಇವರಿಬ್ಬರ ಸಂತಾನ ಪ್ರಾಣ ಚಂದ್ರನ ತಿಥಿಗಳೆಂಬ ಕಲೆಗಳು ವಿತ್ತ. ಕಾಲಾವಯವವಾದ ಕಲೆಗಳು ಜಗತ್ಪರಿಣಾಮವನ್ನುಂಟುಮಾಡುವುದರಿಂದ ಕರ್ಮವೆನಿಸಿವೆ.

[5] ಓತಿಯನ್ನು ನೋಡಿದ ಕೂಡಲೇ ಅಮಂಗಲವಾಯಿತೆಂದು ಅದನ್ನು ಜನರು ಹಿಂಸಿಸುತ್ತಾರೆ.]

**ಯೋ ವೈ ಸ ಸಂವತ್ಸರಃ ಪ್ರಜಾಪತಿಃ ಷೋಡಶಕಲಃ, ಅಯಮೇವ ಸ ಯೋಽಯಮೇವಂವಿತ್ ಪುರುಷಃ; ತಸ್ಯ ವಿತ್ತಮೇವ ಪಂಚದಶ ಕಲಾಃ, ಆತ್ಮೈವಾಸ್ಯ ಷೋಡಶೀಕಲಾ, ಸ, ವಿತ್ತೇನೈವಾ ಚ ಪೂರ್ಯತೇಽಪ ಚ ಕ್ಷೀಯತೇ; ತದೇತನ್ನಭ್ಯಂ ಯದಯಮಾತ್ಮಾ ಪ್ರಧಿರ್ವಿತ್ತಂ, ತಸ್ಮಾದ್ಯದ್ಯಪಿ ಸರ್ವಜ್ಯಾನಿಂ ಜೀಯತೆ ಆತ್ಮನಾ ಚೇಜ್ಜೀವತಿ, ಪ್ರಧಿನಾಗಾದಿತ್ಯೇವಾಹುಃ ॥ ೧೫ ॥**

ಯಃ ವೈ=ಯಾವನು ಸಃ ಸಂವತ್ಸರಃ ಷೋಡಶಕಲಃ ಪ್ರಜಾಪತಿಃ=ಆ ಕಾಲರೂಪನೂ ಹದಿನಾರು ಕಲೆಗಳುಳ್ಳವನೂ ಆದ ಪ್ರಜಾಪತಿಯೊ ಸಃ ಅಯಂ ಏವ=ಆ ಇವನೇ ಯಃ ಅಯಂ ಏವಂವಿತ್ ಪುರುಷಃ=ಯಾವ ಈ ಹೀಗೆ ತಿಳಿದಿರುವ ಪುರುಷನೊ; ತಸ್ಯ ಅವನಿಗೆ ವಿತ್ತಂ ಏವ=ಸಂಪತ್ತೇ ಪಂಚದಶ ಕಲಾಃ=ಹದಿನೈದು ಕಲೆಗಳು; ಅಸ್ಯ ಇವನಿಗೆ ಆತ್ಮಾ ಏವ=ಆತ್ಮನೇ ಷೋಡಶೀ ಕಲಾ=ಹದಿನಾರನೆಯ ಕಲೆಯು. ಸಃ=ಅವನು ವಿತ್ತೇನ ಏವ=ಸಂಪತ್ತಿನಿಂದಲೇ ಆಪೂರ್ಯತೇ ಚ ಅಪಕ್ಷೀಯತೇ ಚ=ವೃದ್ಧಿಯಾಗುತ್ತಾನೆ ಮತ್ತು ಕ್ಷೀಣನಾಗುತ್ತಾನೆ, ಯತ್ ಅಯಂ ಆತ್ಮಾ=ಯಾವುದು ಈ ಶರೀರವೊ ತತ್ ಏತತ್=ಆ ಇದು ನಭ್ಯಂ=[ಚಕ್ರದ ನಾಭಿ, ವಿತ್ತಂ=ಸಂಪತ್ತು ಪ್ರಧಿಃ=ಚಕ್ರದ ಹೊರವಲಯ ಮತ್ತು [ಅರೆಕಾಲುಗಳು]; ತಸ್ಮಾತ್=ಆದುದರಿಂದ ಸರ್ವಜ್ಯಾನಿಂ=ಸರ್ವಸ್ವವನ್ನೂ ಯದಿ ಅಪಿ ಜೀಯತೇ-] ಕಳೆದುಕೊಂಡರೂ ಆತ್ಮನಾ ಜೀವತಿ ಚೇತ್=ತಾನೊಬ್ಬನು ಬದುಕಿದ್ದರೆ ಪ್ರಧಿನಾ ಏವ=ಹೊರಗಿನ ಪರಿವಾರದಿಂದಲೇ ಅಗಾತ್=ಹೋದನು ಇತಿ=ಎಂದು ಆಹುಃ=ಹೇಳುತ್ತಾರೆ.

೧೫. ಕಾಲರೂಪನೂ, ಹದಿನಾರು ಕಲೆಗಳುಳ್ಳವನೂ ಆದ ಆ ಪ್ರಜಾಪತಿಯೇ ಹೀಗೆ ಅರಿತುಕೊಂಡಿರುವ ಈ ಪುರುಷನು.[1] ಅವನಿಗೆ[2] ಸಂಪತ್ತೇ ಹದಿನೈದು ಕಲೆಗಳು, ಆತ್ಮನೇ ಇವನ ಹದಿನಾರನೆಯ ಕಲೆಯು. ಅವನು ಸಂಪತ್ತಿನಿಂದಲೇ ವೃದ್ಧಿಯಾಗುತ್ತಾನೆ ಮತ್ತು ಕ್ಷೀಣನಾಗುತ್ತಾನೆ. ಈ ಶರೀರವೇ ಚಕ್ರನಾಭಿ ಮತ್ತು ಸಂಪತ್ತು ಚಕ್ರದ ಹೊರವಲಯ. ಆದುದರಿಂದ ಮನುಷ್ಯನು ಸರ್ವಸ್ವವನ್ನೂ ಕಳೆದುಕೊಂಡರೂ ತಾನೊಬ್ಬನು ಬದುಕಿದ್ದರೆ[3] ಹೊರಗಿನ ಪರಿವಾರವು ಹೋಯಿತೆಂದು ಜನರು ಹೇಳುತ್ತಾರೆ.

[1 ಕಾಲರೂಪನಾದ ಪ್ರಜಾಪತಿಯು ಅತ್ಯಂತ ಪರೋಕ್ಷನೆಂದು ತಿಳಿಯಕೂಡದು. ಏಕೆಂದರೆ ಇವನೇ ಪ್ರತ್ಯಕ್ಷನಾಗಿ ಕಾಣುತ್ತಿದ್ದಾನೆ. ತ್ರ್ಯನ್ನಾತ್ಮಕನಾದ ಪ್ರಜಾಪತಿಯನ್ನು ತಾನೇ ಎಂದು ಯಾವನು ಅರಿತುಕೊಳ್ಳುವನೊ ಅವನೇ ಈ ಮನುಷ್ಯ.

2 ಪ್ರಜಾಪತಿಗೂ ಇವನಿಗೂ ಇರುವ ಹೋಲಿಕೆಯನ್ನು ಇಲ್ಲಿಂದ ಹೇಳಿದೆ.

3 ಮನುಷ್ಯನು ಬದುಕಿದ್ದರೆ ಇರುವ ಅರೆಕಾಲು-ಹೊರವಲಯಗಳಂತಿರುವ ಸಂಪತ್ತಿನಿಂದ ಪುನಃ ವೃದ್ಧಿಯಾಗುತ್ತಾನೆ.]

**ಅಥ ತ್ರಯೋ ವಾವ ಲೋಕಾಃ—ಮನುಷ್ಯಲೋಕಃ ಪಿತೃಲೋಕೋ ದೇವಲೋಕ ಇತಿ; ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯಃ, ನಾನ್ಯೇನ ಕರ್ಮಣಾ; ಕರ್ಮಣಾ ಪಿತೃಲೋಕಃ, ವಿದ್ಯಯಾ ದೇವಲೋಕಃ; ದೇವಲೋಕೋ ವೈ ಲೋಕಾನಾಂ ಶ್ರೇಷ್ಠಃ, ತಸ್ಮಾದ್ವಿದ್ಯಾಂ ಪ್ರಶಂಸಂತಿ || ೧೬ ||**

ಅಥ=ಈಗ ತ್ರಯಃ ವಾವ=ಮೂರೇ ಲೋಕಾಃ=ಲೋಕಗಳು—ಮನುಷ್ಯಲೋಕಃ=ಮನುಷ್ಯಲೋಕ ಪಿತೃಲೋಕಃ=ಪಿತೃಲೋಕ ದೇವಲೋಕಃ=ದೇವಲೋಕ ಇತಿ=ಎಂದು; ಸಃ ಅಯಂ ಮನುಷ್ಯಲೋಕಃ=ಆ ಈ ಮನುಷ್ಯಲೋಕವು ಪುತ್ರೇಣ ಏವ=ಪುತ್ರನಿಂದಲೇ ಜಯ್ಯಃ=ಜಯಿಸಿಕೊಳ್ಳತಕ್ಕದ್ದು, ಅನ್ಯೇನ ಕರ್ಮಣಾ=ಬೇರೆ ಕರ್ಮದಿಂದ ನ=ಅಲ್ಲ; ಪಿತೃಲೋಕಃ=ಪಿತೃಲೋಕವು ಕರ್ಮಣಾ=ಕರ್ಮದಿಂದ, ದೇವಲೋಕಃ=ದೇವಲೋಕವು ವಿದ್ಯಯಾ=ಉಪಾಸನೆಯಿಂದ; ದೇವಲೋಕಃ ವೈ=ದೇವಲೋಕವೇ ಲೋಕಾನಾಂ=ಲೋಕಗಳಲ್ಲಿ ಶ್ರೇಷ್ಠಃ=ಶ್ರೇಷ್ಠವು; ತಸ್ಮಾತ್=ಆದುದರಿಂದ ವಿದ್ಯಾಂ=ಉಪಾಸನೆಯನ್ನು ಪ್ರಶಂಸಂತಿ=ಹೊಗಳುತ್ತಾರೆ.

೧೬. ಮನುಷ್ಯಲೋಕ, ಪಿತೃಲೋಕ, ದೇವಲೋಕ—ಎಂದು ಮೂರೇ ಲೋಕಗಳು (ಇವೆ). ಆ ಈ ಮನುಷ್ಯಲೋಕವು ಪುತ್ರನಿಂದ ಜಯಿಸಿ

ಕೊಳ್ಳತಕ್ಕದ್ದು, ಬೇರೆ ಕರ್ಮದಿಂದಲ್ಲ; ಪಿತೃಲೋಕವು ಕರ್ಮದಿಂದ,[1] ದೇವಲೋಕವು ಉಪಾಸನೆಯಿಂದ. ದೇವಲೋಕವೇ ಲೋಕಗಳಲ್ಲಿ ಶ್ರೇಷ್ಠವು ಆದುದರಿಂದ ಉಪಾಸನೆಯನ್ನು ಹೊಗಳುತ್ತಾರೆ.

[ಹಿಂದಿನ ಒಂದು ಭಾಗದಲ್ಲಿ ಪುತ್ರ, ಕರ್ಮ, ಅಪರವಿದ್ಯೆ—ಇವು ಲೋಕ ಪ್ರಾಪ್ತಿಗೆ ಸಾಧನಗಳೆಂದು ಸಾಮಾನ್ಯವಾಗಿ ಹೇಳಿದ್ದಾಯಿತು ಈಗ ಪುತ್ರಾದಿಸಾಧನ ಗಳಿಗೂ ವಿಶೇಷಫಲಗಳಿಗೂ ಇರುವ ಸಂಬಂಧವನ್ನು ಹೇಳಿದೆ.

1 ಅಗ್ನಿಹೋತ್ರವೇ ಮೊದಲಾದ ಕರ್ಮದಿಂದ.]

**ಅಥಾತಃ ಸಂಪ್ರತ್ತಿಃ—ಯದಾ ಪ್ರೈಷ್ಯನ್ ಮನ್ಯತೇಽಥ ಪುತ್ರಮಾಹ, ತ್ವಂ ಬ್ರಹ್ಮ, ತ್ವಂ ಯಜ್ಞಃ, ತ್ವಂ ಲೋಕ ಇತಿ; ಸ ಪುತ್ರಃ ಪ್ರತ್ಯಾಹ, ಅಹಂ ಬ್ರಹ್ಮ, ಅಹಂ ಯಜ್ಞಃ, ಅಹಂ ಲೋಕ ಇತಿ; ಯದ್ವೈ ಕಿಂಚಾನೂಕ್ತಂ ತಸ್ಯ ಸರ್ವಸ್ಯ ಬ್ರಹ್ಮೇ-ತ್ಯೇಕತಾ। ಯೇ ವೈ ಕೇ ಚ ಯಜ್ಞಾಸ್ತೇಷಾಂ ಸರ್ವೇಷಾಂ ಯಜ್ಞ ಇತ್ಯೇಕತಾ; ಯೇ ವೈ ಕೇ ಚ ಲೋಕಾಸ್ತೇಷಾಂ ಸರ್ವೇಷಾಂ ಲೋಕ ಇತ್ಯೇಕತಾ; ಏತಾವದ್ವಾ ಇದಂ ಸರ್ವಮ್; ಏತನ್ಮಾ ಸರ್ವಂ ಸನ್ನಯಮಿತೋಽಭುನಜದಿತಿ, ತಸ್ಮಾತ್ ಪುತ್ರ-ಮನುಶಿಷ್ಟಂ ಲೋಕ್ಯಮಾಹುಃ, ತಸ್ಮಾದೇನಮನುಶಾಸತಿ; ಸ ಯದೈವಂವಿದಸ್ಮಾಲ್ಲೋಕಾತ್ ಪ್ರೈತಿ, ಅಥೈಭಿರೇವ ಪ್ರಾಣೈಃ ಸಹ ಪುತ್ರಮಾವಿಶತಿ। ಸ ಯದ್ಯನೇನ ಕಿಂಚಿದಕ್ಷ್ಣಯಾಽಕೃತಂ ಭವತಿ, ತಸ್ಮಾದೇನಂ ಸರ್ವಸ್ಮಾತ್ ಪುತ್ರೋ ಮುಂಚತಿ, ತಸ್ಮಾತ್ ಪುತ್ರೋ ನಾಮ; ಸ ಪುತ್ರೇಣೈವಾಸ್ಮಿಂಲ್ಲೋಕೇ ಪ್ರತಿತಿಷ್ಠತಿ, ಅಥೈನಮೇತೇ ದೈವಾಃ ಪ್ರಾಣಾ ಅಮೃತಾ ಆವಿಶಂತಿ ॥ ೧೭ ॥**

ಅಥ=ಇನ್ನು ಅತಃ=ಆದುದರಿಂದ ಸಂಪ್ರತ್ತಿಃ=ಸಂಪ್ರತ್ತಿ—[ಮನುಷ್ಯನು] ಯದಾ=ಯಾವಾಗ ಪ್ರೈಷ್ಯನ್ ಮನ್ಯತೇ=ತಾನು ಸಾಯುತ್ತೇನೆಂದು ಅರಿಯು ವನೊ ಅಥ=ಆಗ ಪುತ್ರಂ ಆಹ=ಪುತ್ರನಿಗೆ ಹೇಳುತ್ತಾನೆ, ತ್ವಂ=ನೀನು ಬ್ರಹ್ಮ= ಬ್ರಹ್ಮ, ತ್ವಂ ಯಜ್ಞಃ=ನೀನು ಯಜ್ಞ, ತ್ವಂ ಲೋಕಃ=ನೀನು ಲೋಕ ಇತಿ= ಎಂದು; ಸಃ ಪುತ್ರಃ=ಆ ಪುತ್ರನು ಪ್ರತ್ಯಾಹ=ಉತ್ತರಿಸುತ್ತಾನೆ, ಅಹಂ ಬ್ರಹ್ಮ= ನಾನು ಬ್ರಹ್ಮ, ಅಹಂ ಯಜ್ಞಃ=ನಾನು ಯಜ್ಞ, ಅಹಂ ಲೋಕಃ=ನಾನು ಲೋಕ ಇತಿ=ಎಂದು. [ತಂದೆಯು ಯೋಚಿಸುತ್ತಾನೆ :] ಯತ್ ವೈ ಕಿಂಚ=ಏನೇನು

ಅನೂಕ್ತಂ=ಓದಲ್ಪಟ್ಟಿದೆಯೊ ತಸ್ಯ ಸರ್ವಸ್ಯ=ಅದೆಲ್ಲವೂ ಬ್ರಹ್ಮ ಇತಿ=ಬ್ರಹ್ಮ ಎಂಬ ಪದದಲ್ಲಿ ಏಕತಾ=ಒಂದಾಗಿದೆ, ಯೇ ವೈ ಕೇ ಚ=ಯಾವಯಾವ ಯಜ್ಞಾಃ=ಯಜ್ಞಗಳಿವೆಯೊ ತೇಷಾಂ ಸರ್ವೇಷಾಂ=ಅವೆಲ್ಲವೂ ಯಜ್ಞಃ ಇತಿ=ಯಜ್ಞವೆಂಬ ಪದದಲ್ಲಿ ಏಕತಾ=ಒಂದಾಗಿದೆ, ಯೇ ವೈ ಕೇ ಚ=ಯಾವಯಾವ ಲೋಕಾಃ=ಲೋಕಗಳಿವೆಯೊ ತೇಷಾಂ ಸರ್ವೇಷಾಂ=ಅವೆಲ್ಲವೂ ಲೋಕಃ ಇತಿ=ಲೋಕವೆಂಬ ಪದದಲ್ಲಿ ಏಕತಾ=ಒಂದಾಗಿವೆ , ಇದಂ ಸರ್ವಂ=ಇದೆಲ್ಲವೂ ಏತಾವತ್ ವೈ=ಇಷ್ಟೇ ; ಅಯಂ=ಇವನು ಏತತ್ ಸರ್ವಂ ಸನ್=ಇದೆಲ್ಲವೂ ಆಗಿ ಮಾ=ನನ್ನನ್ನು ಇತಃ=ಇಹಲೋಕದಿಂದ ಅಭುನಜತ್=ಕಾಪಾಡುವನು ಇತಿ=ಎಂದು ; ತಸ್ಮಾತ್=ಆದುದರಿಂದ ಅನುಶಿಷ್ಟಂ ಪುತ್ರಂ=ಅನುಶಿಷ್ಟನಾದ ಪುತ್ರನನ್ನು ಲೋಕ್ಯಂ=ಲೋಕ ಪ್ರಾಪ್ತಿಗೆ ಉಪಾಯನು ಆಹುಃ=ಎನ್ನುವರು ; ತಸ್ಮಾತ್=ಆದುದರಿಂದ ಏನಂ=ಇವನನ್ನು ಕುರಿತು ಅನುಶಾಸತಿ=ಅನುಶಾಸನ ಮಾಡುತ್ತಾರೆ ; ಏವಂವಿತ್=ಹೀಗೆ ತಿಳಿದವನು ಯದಾ=ಯಾವಾಗ ಅಸ್ಮಾತ್ ಲೋಕಾತ್=ಈ ಲೋಕದಿಂದ ಪ್ರೈತಿ=ಹೊರಡುತ್ತಾನೆಯೊ ಅಥ=ಆಗ ಸಃ=ಅವನು ಏಭಿಃ ಏವ ಪ್ರಾಣೈಃ ಸಃ=ಈ [ವಾಙ್ಮನಃ] ಪ್ರಾಣಗಳಿಂದಲೇ ಪುತ್ರಂ=ಪುತ್ರನನ್ನು ಆವಿಶತಿ=ವ್ಯಾಪಿಸುತ್ತಾನೆ. ಅನೇನ=ಇವನಿಂದ ಅಕ್ಷ್ಣಯಾ=ಪ್ರಮಾದದಿಂದ ಕಿಂಚಿತ್=ಏನಾದರೂ ಯದಿ ಅಕೃತಂ ಭವತಿ=ಮಾಡಲ್ಪಡದಿದ್ದರೆ ತಸ್ಮಾತ್ ಸರ್ವಸ್ಮಾತ್=ಅದೆಲ್ಲದರಿಂದಲೂ ಸಃ ಪುತ್ರಃ=ಆ ಪುತ್ರನು ಏನಂ=ಇವನನ್ನು ಮುಂಚತಿ ಬಿಡಿಸುತ್ತಾನೆ : ತಸ್ಮಾತ್=ಆದುದರಿಂದ ಪುತ್ರಃ ನಾಮ=ಅವನು ಪುತ್ರನೆಂದು ಕರೆಯಲ್ಪಟ್ಟಿದ್ದಾನೆ ; ಸಃ=ಅವನು ಪುತ್ರೇಣ ಏವ=ಪುತ್ರನಿಂದಲೇ ಅಸ್ಮಿನ್ ಲೋಕೇ=ಈ ಲೋಕದಲ್ಲಿ ಪ್ರತಿತಿಷ್ಠತಿ=ಪ್ರತಿಷ್ಠಿತನಾಗುತ್ತಾನೆ ; ಅಥ=ಆಗ ಏತೇ=ಈ ದೈವಾಃ ಅಮೃತಾಃ=ದೈವವೂ ಅಮೃತವೂ ಆದ ಪ್ರಾಣಾಃ=ಪ್ರಾಣಗಳು ಏನಂ=ಇವನನ್ನು ಆವಿಶಂತಿ=ಪ್ರವೇಶಿಸುತ್ತವೆ.

೧೭. ಇನ್ನು ಆದುದರಿಂದ ಸಂಪ್ರತ್ತಿ[1]—(ಮನುಷ್ಯನು) ತಾನು ಸಾಯುತ್ತೇನೆಂದು ಅರಿತುಕೊಂಡಾಗ[2] ಪುತ್ರನಿಗೆ ಹೇಳುತ್ತಾನೆ : 'ನೀನು ಬ್ರಹ್ಮ,[3] ನೀನು ಯಜ್ಞ,[4] ನೀನು ಲೋಕ'[5] ಪುತ್ರನು ಉತ್ತರಿಸುತ್ತಾನೆ : 'ನಾನು ಬ್ರಹ್ಮ, ನಾನು ಯಜ್ಞ, ನಾನು ಲೋಕ.' (ತಂದೆಯು ಯೋಚಿಸುತ್ತಾನೆ :) 'ಏನೇನು ಓದಲ್ಪಟ್ಟಿದೆಯೊ ಅದೆಲ್ಲವೂ ಬ್ರಹ್ಮ-ಪದದಲ್ಲಿ ಒಂದಾಗಿದೆ. ಯಾವ ಯಾವ ಯಜ್ಞಗಳಿವೆಯೊ ಅವೆಲ್ಲವೂ ಯಜ್ಞ-ಪದದಲ್ಲಿ ಒಂದಾಗಿವೆ ಮತ್ತು ಯಾವ ಯಾವ ಲೋಕಗಳಿವೆಯೊ ಅವೆಲ್ಲವೂ ಲೋಕ-ಪದದಲ್ಲಿ ಒಂದಾಗಿವೆ. (ಗೃಹಸ್ಥನ) ಕರ್ತವ್ಯವೆಲ್ಲ ಇಷ್ಟೇ. ಈ ಪುತ್ರನು ಇದೆಲ್ಲವೂ ಆಗಿ ನನ್ನನ್ನು ಇಹಲೋಕದಿಂದ ಕಾಪಾಡುವನು.' ಆದುದರಿಂದ ಅನುಶಿಷ್ಟ

ನಾದ ಪುತ್ರನನ್ನು 'ಲೋಕಪ್ರಾಪ್ತಿಗೆ ಉಪಾಯನು' ಎನ್ನುವರು. ಆದುದರಿಂದ (ತಂದೆಯು) ಮಗನಿಗೆ ಅನುಶಾಸನಮಾಡುತ್ತಾನೆ. ಹೀಗೆ ಅರಿತುಕೊಂಡಿರುವ ತಂದೆಯು ಈ ಲೋಕದಿಂದ ಹೊರಡುವಾಗ ವಾಙ್ಮನಃಪ್ರಾಣಗಳಿಂದಲೇ ಪುತ್ರನನ್ನು ವ್ಯಾಪಿಸುತ್ತಾನೆ.[6] ಇವನು ಪ್ರಮಾದದಿಂದ ಏನಾದರೂ ಮಾಡದಿದ್ದರೆ ಅದೆಲ್ಲದರಿಂದಲೂ ಪುತ್ರನು ಬಿಡಿಸುತ್ತಾನೆ.[7] ಆದುದರಿಂದ ಅವನು ಪುತ್ರನೆಂದು ಕರೆಯಲ್ಪಟ್ಟಿದ್ದಾನೆ. ತಂದೆಯು ಪುತ್ರನಿಂದಲೇ ಈ ಲೋಕದಲ್ಲಿ ಪ್ರತಿಷ್ಠಿತನಾಗುತ್ತಾನೆ. ದೈವವೂ[8] ಅಮೃತವೂ ಆದ (ವಾಙ್ಮನಃ) ಪ್ರಾಣಗಳು ಇವನನ್ನು ಪ್ರವೇಶಿಸುತ್ತವೆ.

[[1] ತಂದೆಯು ಯಾವ ಪ್ರಕಾರದಿಂದ ಪುತ್ರನಿಗೆ ಕರ್ತವ್ಯಭಾರವನ್ನು ಒಪ್ಪಿಸಿಕೊಡುತ್ತಾನೆಯೊ ಆ ಕರ್ಮವಿಶೇಷಕ್ಕೆ ಸಂಪ್ರತ್ತಿ ಎಂದು ಹೆಸರು.

[2] ಅರಿಷ್ಟಾದಿಗಳ ದರ್ಶನದ ಮೂಲಕ.

[3] 'ನಾನು ಇದುವರೆಗೆ ಮಾಡಿದ ವೇದವಿಷಯಕವಾದ ಅಧ್ಯಯನವನ್ನು ಇನ್ನು ಮುಂದೆ ನೀನು ಮಾಡು.

[4] 'ನಾನು ಮಾಡಬೇಕಾಗಿದ್ದ ಯಜ್ಞಗಳನ್ನೆಲ್ಲ ಇನ್ನು ಮೇಲೆ ನೀನು ಮಾಡು'

[5] ನಾನು ಹೊಂದಬೇಕಾಗಿರುವ ಲೋಕಗಳನ್ನು ನೀನು ಹೊಂದು.'

[6] ಶರೀರಪರಿಚ್ಛೇದಕ್ಕೆ ಕಾರಣವಾಗಿದ್ದ ಮಿಥ್ಯಾಜ್ಞಾನವು ಹೋದುದರಿಂದ ತಂದೆಯ ವಾಙ್ಮನಃಪ್ರಾಣಗಳು ತಮ್ಮ ಆಧಿದೈವಿಕರೂಪದಿಂದ ಎಲ್ಲವನ್ನೂ ವ್ಯಾಪಿಸಿಕೊಳ್ಳುತ್ತವೆ. ಇವುಗಳೊಂದಿಗೆ ತಂದೆಯೂ ಕೂಡ ಎಲ್ಲವನ್ನೂ ವ್ಯಾಪಿಸುತ್ತಾನೆ. ತಂದೆಯು ಮೃತನಾದರೂ ಅನುಶಿಷ್ಟನಾದ ಪುತ್ರನೇ ಆಗಿ ಈ ಲೋಕದಲ್ಲಿ ಉಳಿಯುತ್ತಾನೆ ಎಂದರ್ಥ.

[7] ತಂದೆಯು ಮಾಡದೆ ಇದ್ದ ಕರ್ತವ್ಯವನ್ನು ಪೂರ್ಣಗೊಳಿಸಿ ಲೋಕಪ್ರಾಪ್ತಿಗೆ ಇದ್ದ ಅಡ್ಡಿಯಿಂದ ತಂದೆಯನ್ನು ಬಿಡಿಸುತ್ತಾನೆ.

[8] ಹಿರಣ್ಯಗರ್ಭಸಂಬಂಧವಾದ.]

**ಪೃಥಿವ್ಯೈ ಚೈನಮಗ್ನೇಶ್ಚ ದೈವೀ ವಾಗಾವಿಶತಿ; ಸಾ ವೈ ದೈವೀ ವಾಗ್ಯಯಾ ಯದ್ಯದೇವ ವದತಿ ತತ್ತದ್ಭವತಿ ॥ ೧೮ ॥**

ದೈವೀ ವಾಕ್=ದೈವೀವಾಕ್ಕು ಪೃಥಿವ್ಯೈ ಚ ಪೃಥಿವಿಯಿಂದಲೂ ಅಗ್ನೇಃ ಚ=ಅಗ್ನಿಯಿಂದಲೂ ಏನಮ್=ಇವನನ್ನು ಆವಿಶತಿ=ಪ್ರವೇಶಿಸುತ್ತದೆ; ಸಾ ವೈ ದೈವೀ ವಾಕ್=ಅದೇ ದೈವೀ ವಾಕ್ಕು ಯಯಾ=ಯಾವುದರಿಂದ ಯತ್ ಯತ್ ಏವ=ಏನೇನು ವದತಿ=ಹೇಳುತ್ತಾನೆಯೊ ತತ್ ತತ್=ಅದದು ಭವತಿ=ಆಗುತ್ತದೆ.

೧೮. ಪೃಥ್ವಿ, ಅಗ್ನಿ ಇವುಗಳಿಂದ ಬಂದ ದೈವೀ ವಾಕ್ಕು[1] ಇವನನ್ನು ಪ್ರವೇಶಿಸುತ್ತದೆ. ಯಾವುದರಿಂದ ಇವನು ಹೇಳಿದ್ದೆಲ್ಲ ಆಗುವುದೊ ಅದೇ ದೈವೀ ವಾಕ್ಕು.

[ವಾಗಾದಿಪ್ರಾಣಗಳು ಸಂಪ್ರತ್ತಿಯನ್ನು ಮಾಡಿದ ತಂದೆಯನ್ನು ಸೇರಿಕೊಳ್ಳುವ ಕ್ರಮವನ್ನು ಹೇಳಿದೆ.]

[1] ಅಧಿದೈವಾತ್ಮಕವಾದ ವಾಕ್ಕು. ಪೃಥಿವ್ಯಗ್ನಿರೂಪವಾದ ಈ ವಾಕ್ಕು ಎಲ್ಲ ವಾಕ್ಕುಗಳಿಗೂ ಉಪಾದಾನಕಾರಣವಾಗಿವೆ. ಇದು ಅಜ್ಞಾನಿಯಲ್ಲಿ ಶರೀರಕ್ಕಿರುವ ಸಂಗವೇ ಮೊದಲಾದ ದೋಷಗಳಿಂದ ನಿರುದ್ಧವಾಗಿರುತ್ತದೆ. ಆದರೆ ಆ ದೋಷಗಳು ಹೋದಾಗ ಆವರಣವಿಲ್ಲದ ಪ್ರದೀಪದ ಪ್ರಕಾಶದಂತೆ ಪ್ರಕಾಶಿಸುತ್ತದೆ. ಅನೃತಾದಿ ದೋಷಗಳಿಲ್ಲದ ವಾಕ್ಕು ಅಮೋಘವೂ ಅಪ್ರತಿಬದ್ಧವೂ ಆಗುತ್ತದೆ ಎಂದರ್ಥ.]

**ದಿವಶ್ಚೈನಮಾದಿತ್ಯಾಚ್ಚ ದೈವಂ ಮನ ಆವಿಶತಿ; ತದ್ವೈ ದೈವಂ ಮನೋ ಯೇನಾನಂದ್ಯೇವ ಭವತಿ, ಅಥೋ ನ ಶೋಚತಿ ॥೧೯॥**

ದಿವಃ ಚ=ದ್ಯುಲೋಕದಿಂದಲೂ ಆದಿತ್ಯಾತ್ ಚ=ಆದಿತ್ಯನಿಂದಲೂ [ಬಂದ] ದೈವಂ ಮನಃ=ದೈವಮನಸ್ಸು ಏನಂ=ಆವನನ್ನು ಆವಿಶತಿ=ಪ್ರವೇಶಿಸುತ್ತದೆ; ತತ್ ವೈ=ಅದೇ ದೈವಂ ಮನಃ=ದೈವಮನಸ್ಸು ಯೇನ=ಯಾವುದರಿಂದ ಆನಂದೀ ಏವ ಭವತಿ=ಆನಂದಿಯೇ ಆಗುತ್ತಾನೆಯೊ ಅಥೋ=ಮತ್ತು ನ ಶೋಚತಿ=ಶೋಕಿಸುವುದಿಲ್ಲವೊ.

೧೯. ದ್ಯುಲೋಕದಿಂದಲೂ ಮತ್ತು ಆದಿತ್ಯನಿಂದಲೂ ಬಂದ ದೈವ ಮನಸ್ಸು ಇವನನ್ನು ಪ್ರವೇಶಿಸುತ್ತದೆ. ಯಾವುದರಿಂದ ಆನಂದಿಯೇ ಆಗುತ್ತಾನೆಯೊ ಮತ್ತು ಶೋಕಿಸುವುದಿಲ್ಲವೊ[1] ಅದೇ ದೈವಮನಸ್ಸು.

[[1] ಶೋಕಾದಿಗಳ ಕಾರಣವಿಲ್ಲದುದರಿಂದ.]

**ಅದ್ಭ್ಯಶ್ಚೈನಂ ಚಂದ್ರಮಸಶ್ಚ ದೈವಃ ಪ್ರಾಣ ಆವಿಶತಿ; ಸ ವೈ ದೈವಃ ಪ್ರಾಣೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇ, ಅಥೋ ನ ರಿಷ್ಯತಿ; ಸ ಏವಂವಿತ್ ಸರ್ವೇಷಾಂ ಭೂತಾನಾಮಾತ್ಮಾ ಭವತಿ, ಯಥೈಷಾ ದೇವತೈವಂ ಸಃ; ಯಥೈತಾಂ ದೇವತಾಂ ಸರ್ವಾಣಿ ಭೂತಾನ್ಯವಂತಿ, ಏವಂ ಹೈವಂವಿದಂ ಸರ್ವಾಣಿ ಭೂತಾನ್ಯವಂತಿ। ಯದು ಕಿಂಚೇಮಾಃ ಪ್ರಜಾಃ ಶೋಚಂತಿ, ಅಮೈವಾಸಾಂ ತದ್ಭವತಿ, ಪುಣ್ಯಮೇವಾಮುಂ ಗಚ್ಛತಿ, ನ ಹ ವೈ ದೇವಾನ್ ಪಾಪಂ ಗಚ್ಛತಿ ॥ ೨೦ ॥**

ಅದ್ಭ್ಯಃ=ನೀರಿನಿಂದಲೂ ಚಂದ್ರಮಸಃ ಚ=ಚಂದ್ರನಿಂದಲೂ [ಬಂದ] ದೈವಃ ಪ್ರಾಣಃ=ದೈವಪ್ರಾಣನು ಏನಂ=ಇವನನ್ನು ಆವಿಶತಿ=ಪ್ರವೇಶಿಸುತ್ತಾನೆ. ಯಃ= ಯಾವನು ಸಂಚರನ್ ಚ=ಸಂಚರಿಸುವಾಗಲೂ ಅಸಂಚರನ್ ಚ=ಸಂಚರಿಸದೆ ಇರುವಾಗಲೂ ನ ವ್ಯಥತೇ=ವ್ಯಥೆಪಡುವುದಿಲ್ಲವೋ ಅಥೋ=ಮತ್ತು ನ ರಿಷ್ಯತಿ=ವಿನಾಶವಾಗುವುದಿಲ್ಲವೋ ಸಃ ವೈ=ಅದೇ ದೈವಃ ಪ್ರಾಣಃ=ದೈವಪ್ರಾಣನು. ಏವಂವಿತ್ ಸಃ= ಹೀಗೆ ತಿಳಿದುಕೊಂಡಿರುವವನು ಸರ್ವೇಷಾಂ ಭೂತಾನಾಂ=ಸಮಸ್ತ ಪ್ರಾಣಿಗಳ ಆತ್ಮಾ ಭವತಿ=ಆತ್ಮನಾಗುತ್ತಾನೆ; ಯಥಾ ಏಷಾ ದೇವತಾ=ಈ ದೇವತೆಯು ಹೇಗೂ ಏವಂ ಸಃ=ಹಾಗೆ ಅವನು; ಯಥಾ=ಹೇಗೆ ಸರ್ವಾಣಿ ಭೂತಾನಿ=ಸಮಸ್ತ ಪ್ರಾಣಿಗಳು ಏತಾಂ ದೇವತಾಂ=ಈ ದೇವತೆಯನ್ನು ಅವಂತಿ=ಕಾಪಾಡುತ್ತವೆಯೋ, ಪೂಜಿಸುತ್ತವೆಯೊ ಏವಂ ಹ=ಹಾಗೆಯೇ ಸರ್ವಾಣಿ=ಭೂತಾನಿ=ಸಮಸ್ತ ಪ್ರಾಣಿಗಳು ಏವಂವಿದಂ=ಹೀಗೆ ಅರಿತುಕೊಂಡಿರುವವನನ್ನು ಅವಂತಿ=ಪೂಜಿಸುತ್ತವೆ. ಇಮಾಃ ಪ್ರಜಾಃ=ಈ ಪ್ರಜೆಗಳು ಯತ್ ಉ ಕಿಂಚ=ಯಾವಯಾವುದನ್ನು ಕುರಿತು ಶೋಚಂತಿ ಶೋಕಿಸುವರೊ ಆಸಾಂ=ಅವರ ತತ್=ಅದು ಅಮಾ ಏವ ಭವತಿ=ಅವರೊಂದಿಗೆ ಇರುತ್ತದೆ, ಪುಣ್ಯಂ ಏವ=ಪುಣ್ಯವೇ ಅಮುಂ ಗಚ್ಛತಿ=ಇವನಿಗೆ ಬರುತ್ತದೆ, ಪಾಪಂ=ಪಾಪವು ದೇವಾನ್ ನ ಹ ವೈ ಗಚ್ಛತಿ=ದೇವತೆಗಳಿಗೆ ಬರುವುದೇ ಇಲ್ಲ.

೨೦. ನೀರಿನಿಂದಲೂ ಮತ್ತು ಚಂದ್ರನಿಂದಲೂ ಬಂದ ದೈವಪ್ರಾಣನು ಇವನನ್ನು ಪ್ರವೇಶಿಸುತ್ತಾನೆ. ಸಂಚರಿಸುವಾಗಲೂ ಸಂಚರಿಸದಿರುವಾಗಲೂ[1] ಯಾವನು ವ್ಯಥೆಪಡುವುದಿಲ್ಲವೋ ಮತ್ತು ನಾಶವಾಗುವುದಿಲ್ಲವೋ ಅವನೇ ದೈವಪ್ರಾಣನು. ಹೀಗೆ ಅರಿತುಕೊಂಡಿರುವವನು ಸಮಸ್ತ ಪ್ರಾಣಿಗಳ ಆತ್ಮನಾಗುವನು.[2] ಈ ದೇವತೆ (ಹಿರಣ್ಯಗರ್ಭ) ಹೇಗೋ ಅವನೂ ಹಾಗೆಯೇ. ಸಮಸ್ತ ಪ್ರಾಣಿಗಳು ಈ ದೇವತೆಯನ್ನು ಹೇಗೆ ಪೂಜಿಸುವುವೊ ಹಾಗೆಯೇ. ಹೀಗೆ ಅರಿತುಕೊಂಡಿರುವವನನ್ನು ಎಲ್ಲ ಪ್ರಾಣಿಗಳು ಪೂಜಿಸುವುವು. ಈ ಪ್ರಜೆಗಳು ಯಾವಯಾವುದನ್ನು ಕುರಿತು ಶೋಕಿಸುವರೊ[3] ಅದು ಅವರೊಂದಿಗೆ ಇರುತ್ತದೆ. ಇವನಿಗೆ ಪುಣ್ಯವೇ ಬರುತ್ತದೆ, ದೇವತೆಗಳಿಗೆ ಪಾಪವು ಬರುವುದೇ ಇಲ್ಲ.

[[1] ವ್ಯಷ್ಟಿ-ದೃಷ್ಟಿಯಿಂದ ಸಂಚರಿಸುವಾಗ, ಸಮಷ್ಟಿದೃಷ್ಟಿಯಿಂದ ಸಂಚರಿಸದಿರುವಾಗ ಅಥವಾ ಜಂಗಮಗಳಲ್ಲಿ ಸಂಚರಿಸುವಾಗ ಮತ್ತು ಸ್ಥಾವರಗಳಲ್ಲಿ ಸಂಚರಿಸದಿರುವಾಗ.

[2] ತ್ರ್ಯನ್ನಾತ್ಮದರ್ಶನವನ್ನು ಅರಿತುಕೊಂಡಿರುವವನು ಸರ್ವಪ್ರಾಣಿಗಳ ವಾಙ್ಮನಃಪ್ರಾಣಗಳಾಗುತ್ತಾನೆ ಎಂದರೆ ಸರ್ವಜ್ಞನೂ ಸರ್ವಕರ್ತೃವೂ ಆಗುತ್ತಾನೆ.

³ ಪರಿಚ್ಛಿನ್ನಬುದ್ಧಿಯಿಂದ ಶೋಕವುಂಟಾಗುತ್ತದೆ. ಆದರೆ ಸರ್ವಾತ್ಮನಾದವನು ಯಾವುದನ್ನೂ ಸೇರದಿರುವುದರಿಂದಲೂ ಬಿಡದಿರುವುದರಿಂದಲೂ ಶೋಕಿಸುವುದಿಲ್ಲ ]

**ಅಥಾತೋ ವ್ರತಮೀಮಾಂಸಾ; ಪ್ರಜಾಪತಿರ್ಹ ಕರ್ಮಾಣಿ ಸಸೃಜೇ, ತಾನಿ ಸೃಷ್ಟಾನ್ಯನ್ಯೋನ್ಯೇನಾಸ್ಪರ್ಧಂತ—ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ, ದ್ರಕ್ಷ್ಯಾಮ್ಯಹಮಿತಿ ಚಕ್ಷುಃ, ಶ್ರೋಷ್ಯಾಮ್ಯಹಮಿತಿ ಶ್ರೋತ್ರಮ್, ಏವಮನ್ಯಾನಿ ಕರ್ಮಾಣಿ ಯಥಾಕರ್ಮ; ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇ, ತಾನ್ಯಾಪ್ನೋತ್, ತಾನ್ಯಾಪ್ತ್ವಾ ಮೃತ್ಯುರವಾರುಂಧ; ತಸ್ಮಾಚ್ಛ್ರಾಮ್ಯತ್ಯೇವ ವಾಕ್, ಶ್ರಾಮ್ಯತಿ ಚಕ್ಷುಃ, ಶ್ರಾಮ್ಯತಿ ಶ್ರೋತ್ರಮ್; ಅಥೇಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ ತಾನಿ ಜ್ಞಾತುಂ ದಧ್ರಿರೇ। ಅಯಂ ವೈ ನಃ ಶ್ರೇಷ್ಠೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇ, ಅಥೋ ನ ರಿಷ್ಯತಿ ಹಂತಾಸ್ಯೈವ ಸರ್ವೇ ರೂಪಮಸಾಮೇತಿ; ತ ಏತಸ್ಯೈವ ಸರ್ವೇ ರೂಪಮಭವನ್, ತಸ್ಮಾದೇತ ಏತೇನಖ್ಯಾಯಂತೇ ಪ್ರಾಣಾ ಇತಿ; ತೇನ ಹ ವಾವ ತತ್ ಕುಲಮಾಚಕ್ಷತೇ ಯಸ್ಮಿನ್ ಕುಲೇ ಭವತಿ ಯ ಏವಂ ವೇದ; ಯ ಉ ಹೈವಂವಿದಾ ಸ್ಪರ್ಧತೇಽನುಶುಷ್ಯತಿ, ಅನುಶುಷ್ಯ ಹೈವಾಂತತೋ ಮ್ರಿಯತಿ ಇತ್ಯಧ್ಯಾತ್ಮಮ್ ॥ ೨೧ ॥**

ಅಥ ಅತಃ=ಈಗ ಆದುದರಿಂದ ವ್ರತಮೀಮಾಂಸಾ=ವ್ರತದ ಮೀಮಾಂಸೆಯು ಪ್ರಜಾಪತಿಃ ಹ=ಪ್ರಜಾಪತಿಯು ಕರ್ಮಾಣಿ=[ವಾಗಾದಿ]ಕರಣಗಳನ್ನು ಸಸೃಜೇ=ಸೃಷ್ಟಿಸಿದನು; ತಾನಿ ಸೃಷ್ಟಾನಿ=ಅವು ಸೃಷ್ಟಿಸಲ್ಪಟ್ಟಮೇಲೆ ಅನ್ಯೋನ್ಯೇನ=ಪರಸ್ಪರ ಅಸ್ಪರ್ಧಂತ=ಸ್ಪರ್ಧಿಸಿದುವು—ಅಹಂ ವದಿಷ್ಯಾಮಿ ಏವ=ನಾನು ಮಾತನಾಡುತ್ತಲೇ ಇರುವೆನು ಇತಿ=ಎಂದು ವಾಕ್=ವಾಕ್ಕು ದಧ್ರೇ=ನಿರ್ಧರಿಸಿತು, ಅಹಂ ದ್ರಕ್ಷ್ಯಾಮಿ=ನಾನು ನೋಡುತ್ತೇನೆ ಇತಿ=ಎಂದು ಚಕ್ಷುಃ=ಚಕ್ಷುಸ್ಸು, ಅಹಂ ಶ್ರೋಷ್ಯಾಮಿ=ನಾನು ಕೇಳುತ್ತೇನೆ ಇತಿ=ಎಂದು ಶ್ರೋತ್ರಂ=ಶ್ರೋತ್ರ, ಏವಂ=ಹೀಗೆ ಅನ್ಯಾನಿ ಕರ್ಮಾಣಿ=ಇತರ ಕರಣಗಳು ಯಥಾಕರ್ಮ=ತಮ್ಮ ತಮ್ಮ ಕರ್ಮಕ್ಕೆ ತಕ್ಕಂತೆ [ನಿರ್ಧರಿಸಿದುವು], ಮೃತ್ಯುಃ=ಮೃತ್ಯುವು ಶ್ರಮಃ ಭೂತ್ವಾ=ಶ್ರಮವಾಗಿ ತಾನಿ=ಅವುಗಳನ್ನು ಉಪಯೇಮೇ=ಹಿಡಿದುಕೊಂಡನು, ತಾನಿ=ಅವುಗಳನ್ನು ಆಪ್ನೋತ್=

ಹೊಂದಿದನು, ತಾನಿ=ಅವುಗಳನ್ನು ಆಪ್ತ್ವಾ=ಹೊಂದಿ ಮೃತ್ಯುಃ=ಮೃತ್ಯುವು ಅವಾರುಂಧ = ತಡೆಗಟ್ಟಿದನು ; ತಸ್ಮಾತ್ ಆದುದರಿಂದ ವಾಕ್=ವಾಕ್ಕು ಶ್ರಾಮ್ಯತಿ ಏವ = ಆಯಾಸಗೊಳ್ಳುತ್ತಲೇ ಇದೆ, ಚಕ್ಷುಃ ಶ್ರಾಮ್ಯತಿ= ಚಕ್ಷುಸ್ಸು ಆಯಾಸಗೊಳ್ಳುತ್ತದೆ, ಶ್ರೋತ್ರಂ ಶ್ರಾಮ್ಯತಿ=ಶ್ರೋತ್ರವು ಆಯಾಸ ಗೊಳ್ಳುತ್ತದೆ, ಅಥ=ಆದರೆ ಯಃ ಅಯಂ=ಯಾವ ಈ ಮಧ್ಯಮಃ ಪ್ರಾಣಃ= ದೇಹಮಧ್ಯಸ್ಥ ಪ್ರಾಣನು ಇಮಂ ಏವ=ಇವನನ್ನೇ, ಮೃತ್ಯುವನ್ನು ನ ಆಪ್ನೋತ್= ಹೊಂದಲಿಲ್ಲ ; ತಾನಿ=ಅವುಗಳು, ಕರಣಗಳು ಜ್ಞಾತುಂ=ಅದನ್ನು ಅರಿತುಕೊಳ್ಳಲು ದಧ್ರಿರೇ=ನಿರ್ಧರಿಸಿದುವು. ಯಃ ಸಂಚರನ್ ಚ ಅಸಂಚರನ್ ಚ ನ ವ್ಯಥತೇ, ಅಥೋ ನ ರಿಷ್ಯತಿ; ಅಯಂ ವೈ ಇವನೇ ನಃ=ನಮ್ಮಲ್ಲಿ ಶ್ರೇಷ್ಠಃ=ಶ್ರೇಷ್ಠನು ಹಂತ=ಸರಿ ಸರ್ವೇ=ಎಲ್ಲರೂ ಅಸ್ಯ ಏವ ರೂಪಂ=ಇವನದೇ ರೂಪವನ್ನು ಅಸಾಮ=ಹೊಂದುವ ಇತಿ=ಎಂದು ; ತೇ ಸರ್ವೇ=ಇವೆಲ್ಲವೂ ಏತಸ್ಯ ಏವ ರೂಪಂ ಅಭವನ್ = ಇವನದೇ ರೂಪವಾದುವು. ತಸ್ಮಾತ್ = ಆದುದರಿಂದ ಏತೇ=ಇವು ಏತೇನ=ಇದರ [ಹೆಸರಿನಿಂದ] ಪ್ರಾಣಾಃ=ಪ್ರಾಣಗಳು ಇತಿ=ಎಂದು ಆಖ್ಯಾಯಂತೇ=ಕರೆಯಲ್ಪಡುತ್ತಿವೆ ; ಯಃ=ಯಾವನು ಏವಂ=ಹೀಗೆ ವೇದ= ಅರಿತುಕೊಳ್ಳುವನೊ [ಅವನು] ಯಸ್ಮಿನ್ ಕುಲೇ=ಯಾವ ಕುಲದಲ್ಲಿ ಭವತಿ=ಹುಟ್ಟು ತ್ತಾನೆಯೊ ತತ್ ಕುಲಂ=ಆ ಕುಲವು ತೇನ ಹ ನಾಮ್ನಾ=ಅವನ ಹೆಸರಿನಿಂದಲೇ ಆಚ ಕ್ಷತೇ=ಹೇಳುತ್ತಾರೆ ; ಯಃ ಉ ಹ=ಯಾವನು ಏವಂವಿದಾ=ಹೀಗೆ ಅರಿತುಕೊಂಡಿ ರುವವನೊಂದಿಗೆ ಸ್ಪರ್ಧತೇ=ಸ್ಪರ್ಧಿಸುವನೊ [ಅವನು] ಅನುಶುಷ್ಯತಿ=ಒಣಗುತ್ತಾನೆ, ಅನುಶುಷ್ಯ=ಒಣಗಿ ಅಂತತಃ=ಕೊನೆಯಲ್ಲಿ ಮ್ರಿಯತೇ ಹ ಏವ=ಸಾಯುತ್ತಾನೆ, ಇತಿ=ಎಂದು ಅಧ್ಯಾತ್ಮಂ=ಅಧ್ಯಾತ್ಮ.

೨೧. ಈಗ ಆದುದರಿಂದ ವ್ರತದ ಮೀಮಾಂಸೆ—ಪ್ರಜಾಪತಿಯು ವಾಗಾದಿ)ಕರಣಗಳನ್ನು ಸೃಷ್ಟಿಸಿದನು. ಅವು ಸೃಷ್ಟಿಸಲ್ಪಟ್ಟ ಮೇಲೆ ಪರ ಸ್ಪರ ಸ್ಪರ್ಧಿಸಿದುವು : 'ನಾನು ಮಾತನಾಡುತ್ತಲೇ ಇರುವೆನು' ಎಂದು ವಾಕ್ಕು ನಿರ್ಧರಿಸಿತು. 'ನಾನು ನೋಡುತ್ತೇನೆ' ಎಂದು ಚಕ್ಷುಸ್ಸು, 'ನಾನು ಕೇಳುತ್ತೇನೆ' ಎಂದು ಶ್ರೋತ್ರವು. ಹೀಗೆ ಇತರ ಕರಣಗಳೂ ತಮ್ಮ ತಮ್ಮ ಕರ್ಮಕ್ಕೆ ತಕ್ಕಂತೆ (ನಿರ್ಧರಿಸಿದುವು). ಮೃತ್ಯುವು ಶ್ರಮರೂಪದಿಂದ ಅವು ಗಳನ್ನು ಹಿಡಿದುಕೊಂಡನು, ಅವುಗಳನ್ನು ಹೊಂದಿದನು,[1] ಅವುಗಳನ್ನು ಹೊಂದಿ ಮೃತ್ಯುವು ತಡೆಗಟ್ಟಿದನು. ಆದುದರಿಂದ ವಾಕ್ಕು ಆಯಾಸ ಗೊಳ್ಳುತ್ತಲೇ ಇದೆ, ಚಕ್ಷುಸ್ಸು ಆಯಾಸಗೊಳ್ಳುತ್ತದೆ, ಶ್ರೋತ್ರವು ಆಯಾಸ ಗೊಳ್ಳುತ್ತದೆ. ಆದರೆ ಮೃತ್ಯುವು ದೇಹಮಧ್ಯಸ್ಥಪ್ರಾಣನನ್ನು ಹಿಡಿಯಲಿಲ್ಲ.

ಕರಣಗಳು ಪ್ರಾಣನನ್ನು ಅರಿತುಕೊಳ್ಳಲು ನಿರ್ಧರಿಸಿದುವು: ಯಾವನ್ನು ಸಂಚರಿಸುವಾಗಲೂ ಸಂಚರಿಸದಿರುವಾಗಲೂ ವ್ಯಥೆಪಡುವುದಿಲ್ಲವೊ ಮತ್ತು ನಾಶವಾಗುವುದಿಲ್ಲವೊ ಅವನೇ ನಮ್ಮಲ್ಲಿ ಶ್ರೇಷ್ಠನು ಸರಿ, ನಾವೆಲ್ಲವೂ ಇವನ ರೂಪವನ್ನೇ ಹೊಂದುವ.' ಇವೆಲ್ಲವೂ ಇವನ ರೂಪವನ್ನೇ ಪಡೆದುವು. ಆದುದರಿಂದ ಕರಣಗಳು ಇವನ ಹೆಸರಿನಿಂದ 'ಪ್ರಾಣಗಳು' ಎಂದು ಕರೆಯಲ್ಪಡುತ್ತವೆ. ಹೀಗೆ ಅರಿತುಕೊಂಡವನು ಯಾವ ಕುಲದಲ್ಲಿ ಹುಟ್ಟುತ್ತಾನೆಯೊ ಆ ಕುಲವು ಇವನ ಹೆಸರಿನಿಂದಲೆ ಕರೆಯಲ್ಪಡುತ್ತದೆ. ಮತ್ತು ಹೀಗೆ ಅರಿತುಕೊಂಡಿರುವವನೊಂದಿಗೆ ಯಾವನು ಸ್ಪರ್ಧಿಸುತ್ತಾನೆಯೊ ಅವನು ಒಣಗುತ್ತಾನೆ, ಒಣಗಿ ಕೊನೆಗೆ ಸಾಯುತ್ತಾನೆ. ಇದು ಅಧ್ಯಾತ್ಮ [2]

[[1] ಶ್ರಮರೂಪದಿಂದ ಕರಣಗಳಿಗೆ ಕಾಣಿಸಿಕೊಂಡನು ಎಂದರ್ಥ.

[2] ಶರೀರಕ್ಕೆ ಸಂಬಂಧಪಟ್ಟ ಪ್ರಾಣೋಪಾಸನೆಯು ಇಲ್ಲಿಗೆ ಮುಗಿಯಿತು.]

**ಅಥಾಧಿದೈವತಂ — ಜ್ವಲಿಷ್ಯಾಮ್ಯೇವಾಹಮಿತ್ಯಗ್ನಿರ್ದಧ್ರೇ, ತಪ್ಸ್ಯಾಮ್ಯಹಮಿತ್ಯಾದಿತ್ಯಃ, ಭಾಸ್ಯಾಮ್ಯಹಮಿತಿ ಚಂದ್ರಮಾಃ, ಏವಮನ್ಯಾ ದೇವತಾ ಯಥಾದೈವತಂ;ಸ ಯಥೈಷಾಂ ಪ್ರಾಣಾನಾಂ ಮಧ್ಯಮಃ ಪ್ರಾಣಃ, ಏವಮೇತಾಸಾಂ ದೇವತಾನಾಂ ವಾಯುಃ; ಮ್ಲೋಚಂತಿ ಹ್ಯನ್ಯಾ ದೇವತಾಃ, ನ ವಾಯುಃ; ಸೈಷಾನಸ್ತಮಿತಾ ದೇವತಾ ಯದ್ವಾಯುಃ || ೨೨ ||**

ಅಥ=ಈಗ ಅಧಿದೈವತಂ=ಅಧಿದೈವತ, ದೇವತಾವಿಷಯಕ ದರ್ಶನ: ಅಹಂ ಜ್ವಲಿಷ್ಯಾಮಿ ಏವ=ನಾನು ಜ್ವಲಿಸುತ್ತಲೇ ಇರುವೆನು ಇತಿ=ಎಂದು ಅಗ್ನಿಃ=ಅಗ್ನಿಯು ದಧ್ರೇ=ನಿರ್ಧರಿಸಿದನು; ಅಹಂ ತಪ್ಸ್ಯಾಮಿ=ನಾನು ತಪಿಸುತ್ತೇನೆ ಇತಿ=ಎಂದು ಆದಿತ್ಯಃ=ಆದಿತ್ಯನು; ಅಹಂ ಭಾಸ್ಯಾಮಿ=ನಾನು ಪ್ರಕಾಶಿಸುತ್ತೇನೆ ಇತಿ=ಎಂದು ಚಂದ್ರಮಾಃ=ಚಂದ್ರನು; ಏವಂ=ಹೀಗೆ ಅನ್ಯಾಃ ದೇವತಾಃ=ಇತರ ದೇವತೆಗಳೂ ಯಥಾದೈವತಂ=ತಮ್ಮ ದೈವತ್ವಾನುಸಾರಕ್ಕೆ ಅನುಗುಣವಾಗಿ [ನಿಶ್ಚಯಿಸಿದರು]; ಏಷಾಂ ಪ್ರಾಣಾನಾಂ=ಈ ಇಂದ್ರಿಯಗಳ ಮಧ್ಯದಲ್ಲಿ ಸಃ ಮಧ್ಯಮಃ=ಆ ದೇಹಮಧ್ಯಸ್ಥನಾದ ಪ್ರಾಣನು ಯಥಾ=ಹೇಗೊ ಏವಂ=ಹಾಗೆ ಏತಾಸಾಂ ದೇವತಾನಾಂ=ಈ ದೇವತೆಗಳ ಮಧ್ಯದಲ್ಲಿ ವಾಯುಃ=ವಾಯುವು; ಹಿ=ಏಕೆಂದರೆ ಅನ್ಯಾಃ ದೇವತಾಃ=ಇತರ ದೇವತೆ

ಗಳು ಮ್ಲೋಚಂತಿ=ಅಸ್ತಮಿಸುತ್ತಾರೆ, ವಾಯುಃ ನ=ವಾಯುವು ಅಸ್ತವಾಗುವುದಿಲ್ಲ; ಯತ್ ವಾಯುಃ, ಸಾ ಏಷಾ ದೇವತಾ=ಯಾವ ವಾಯುವೆಂಬ ಆ ಈ ದೇವತೆಯು ಅನಸ್ತಮಿತಾ=ಅಸ್ತಮಿಸದಿರುವುದು

೨೨. ಈಗ ದೇವತಾವಿಷಯಕ ದರ್ಶನ: 'ನಾನು ಜ್ವಲಿಸುತ್ತಲೇ ಇರುವೆನು' ಎಂದು ಅಗ್ನಿಯು ನಿರ್ಧರಿಸಿದನು. 'ನಾನು ತಪಿಸುತ್ತೇನೆ' ಎಂದು ಆದಿತ್ಯನು, 'ನಾನು ಪ್ರಕಾಶಿಸುತ್ತೇನೆ' ಎಂದು ಚಂದ್ರನು. ಹೀಗೆ ಇತರ ದೇವತೆಗಳೂ ತಮ್ಮ ದೈವವ್ಯಾಪಾರಕ್ಕೆ ಅನುಗುಣವಾಗಿ (ನಿಶ್ಚಯಿಸಿದರು). ಶರೀರಮಧ್ಯಸ್ಥನಾದ ಪ್ರಾಣನು ಇಂದ್ರಿಯಗಳ ಮಧ್ಯದಲ್ಲಿ ಹೇಗೊ ಹಾಗೆ ವಾಯುವು ಈ ದೇವತೆಗಳ ಮಧ್ಯದಲ್ಲಿ. ಇತರ ದೇವತೆಗಳು ಅಸ್ತಮಿಸುತ್ತಾರೆ.[1] ಆದರೆ ವಾಯುವು ಅಸ್ತಮಿಸುವುದಿಲ್ಲ. ವಾಯುವು ಅಸ್ತಮಿಸದ ದೇವತೆ[2]

[ಯಾವ ದೇವತಾವಿಶೇಷದ ವ್ರತಾಚರಣೆಯು ಶ್ರೇಯಸ್ಕರವು ಎಂದು ವಿಚಾರ ಮಾಡಲಾಗಿದೆ

[1] ಅಗ್ನ್ಯಾದಿದೇವತೆಗಳು ಅಧ್ಯಾತ್ಮವಾದ ವಾಗಾದಿಗಳಂತೆ 'ಅಸ್ತಮಿಸುತ್ತವೆ' ಎಂದರೆ ತಮ್ಮ ಕರ್ಮಗಳನ್ನು ಬಿಟ್ಟು ಸುಮ್ಮನಾಗುತ್ತವೆ.

[2] ಶರೀರಕ್ಕೆ ಸಂಬಂಧಪಟ್ಟ ಪ್ರಾಣೋಪಾಸನೆಯೂ ದೇವತಾವಿಷಯಕವಾದ ವಾಯುವಿನ ಉಪಾಸನೆಯೂ ಭಗ್ನವಾಗುವುದಿಲ್ಲವೆಂದು ಇಲ್ಲಿ ನಿರ್ಧರಿಸಿದ್ದಾಯಿತು.]

**ಅಥೈಷ ಶ್ಲೋಕೋ ಭವತಿ—'ಯತಶ್ಚೋದೇತಿ ಸೂರ್ಯಃ, ಅಸ್ತಂ ಯತ್ರ ಚ ಗಚ್ಛತಿ' ಇತಿ ಪ್ರಾಣಾದ್ವಾ ಏಷ ಉದೇತಿ, ಪ್ರಾಣೇಽಸ್ತಮೇತಿ; 'ತಂ ದೇವಾಶ್ಚಕ್ರಿರೇ ಧರ್ಮಂ, ಸ ಏವಾದ್ಯ, ಸ ಉ ಶ್ವಃ' ಇತಿ; ಯದ್ವಾ ಏತೇಽಮುರ್ಹ್ಯಧ್ರಿಯಂತ ತದೇವಾಪ್ಯದ್ಯ ಕುರ್ವಂತಿ। ತಸ್ಮಾದೇಕಮೇವ ವ್ರತಂ ಚರೇತ್, ಪ್ರಾಣ್ಯಾಚ್ಚೈವಾಪಾನ್ಯಾಚ್ಚ, ನೇನ್ಮಾ ಪಾಪ್ಮಾ ಮೃತ್ಯುರಾಪ್ನುವದಿತಿ; ಯದ್ಯು ಚರೇತ್ ಸಮಾಪಿಪಯಿಷೇತ್, ತೇನೋ ಏತಸ್ಯೈ ದೇವತಾಯೈ ಸಾಯುಜ್ಯಂ ಸಲೋಕತಾಂ ಜಯತಿ ॥ ೨೩ ॥ ಇತಿ ಪಂಚಮಂ ಬ್ರಾಹ್ಮಣಮ್ ॥**

ಅಥ=ಈಗ ಏಷಃ=ಈ ಶ್ಲೋಕಃ=ಶ್ಲೋಕವು ಭವತಿ=ಇದೆ : ಯತಃ ಚ=ಯಾವನಿಂದ ಸೂರ್ಯಃ=ಸೂರ್ಯನು ಉದೇತಿ=ಉದಯಿಸುತ್ತಾನೆಯೊ ಯತ್ರ ಚ=ಯಾವನಲ್ಲಿ ಅಸ್ತಂ ಗಚ್ಛತಿ=ಅಸ್ತಮಿಸುತ್ತಾನೆಯೊ ತಂ ಧರ್ಮಂ=ಆ ವ್ರತವನ್ನು ದೇವಾಃ=ದೇವತೆಗಳು ಚಕ್ರಿರೇ=ಆಚರಿಸಿದರು ; ಸಃ ಏವ=ಅದೇ ಅದ್ಯ=ಈಗಲೂ ಸಃ ಉ=ಅದೇ ಶ್ವಃ=ನಾಳೆಯೂ [ದೇವತೆಗಳಿಂದ ಆಚರಿಸಲ್ಪಡುತ್ತದೆ]. ಪ್ರಾಣಾತ್ ವೈ=ಪ್ರಾಣನಿಂದಲೇ ಏಷಃ=ಈ [ಸೂರ್ಯನು] ಉದೇತಿ=ಉದಯಿಸುತ್ತಾನೆ, ಪ್ರಾಣೇ=ಪ್ರಾಣನಲ್ಲಿ ಅಸ್ತಂ ಏತಿ=ಅಸ್ತಮಿಸುತ್ತಾನೆ; ಏತೇ=ಈ [ದೇವತೆಗಳು] ಯತ್ ವೈ=ಯಾವುದನ್ನು ಅಮುರ್ಹಿ=ಆಗ ಅಧ್ರಿಯಂತ=ಆಚರಿಸಿದರೊ, ತತ್ ಏವ=ಅದನ್ನೇ ಅದ್ಯ ಅಪಿ=ಈಗಲೂ ಕೂಡ ಕುರ್ವಂತಿ=ಆಚರಿಸುತ್ತಾರೆ ತಸ್ಮಾತ್=ಆದುದರಿಂದ ಏಕಂ ಏವ ವ್ರತಂ=ಒಂದೇ ವ್ರತವನ್ನು ಚರೇತ್=ಆಚರಿಸಬೇಕು—ಪ್ರಾಣ್ಯಾತ್ ಚ=ಪ್ರಾಣನಕ್ರಿಯೆಯನ್ನು ಮಾಡಬೇಕು ಅಪಾನ್ಯಾತ್ ಚ=ಅಪಾನ ಕ್ರಿಯೆಯನ್ನು ಮಾಡಬೇಕು, ನೇತ್=ಇಲ್ಲವಾದರೆ ಮಾ=ನನ್ನನ್ನು ಪಾಪ್ಮಾ ಮೃತ್ಯುಃ=ಪಾಪರೂಪಿಯಾದ ಮೃತ್ಯುವು ಆಪ್ನುವತ್=ಹೊಂದುತ್ತದೆ ಇತಿ=ಎಂದು, ಯದಿ ಉ ಆಚರೇತ್=ಅದನ್ನು ಆಚರಿಸಿದರೆ ಸಮಾಪಿಪಯಿಷೇತ್=ಸಮಾಪ್ತಿ ಮಾಡಲು ಇಚ್ಛಿಸಬೇಕು ; ತೇನ ಉ=ಅದರಿಂದ ಏತಸ್ಯೈ ದೇವತಾಯೈ=ಈ ದೇವತೆಯೊಂದಿಗೆ ಸಾಯುಜ್ಯಂ=ಸಾಯುಜ್ಯವನ್ನೂ ಸಲೋಕತಾಂ=ಸಾಲೋಕ್ಯವನ್ನೂ ಜಯತಿ=ಹೊಂದುತ್ತಾನೆ.

೨೩. ಈಗ ಈ ಶ್ಲೋಕವಿರುವುದು : 'ಯಾವ (ವಾಯುವಿನಿಂದ) ಸೂರ್ಯನು ಉದಯಿಸುತ್ತಾನೆಯೊ[1] ಮತ್ತು ಯಾವನಲ್ಲಿ ಅಸ್ತಮಿಸುತ್ತಾನೆಯೊ[2] ಅವನ ವ್ರತವನ್ನು[3] ದೇವತೆಗಳು[4] ಆಚರಿಸಿದರು. ಅದೇ (ವ್ರತವು) ಈಗಲೂ ನಾಳೆಯೂ (ದೇವತೆಗಳಿಂದ ಆಚರಿಸಲ್ಪಡುತ್ತದೆ).' ಈ ಸೂರ್ಯನು ಪ್ರಾಣನಿಂದಲೇ ಉದಯಿಸುತ್ತಾನೆ, ಪ್ರಾಣನಲ್ಲಿಯೇ ಅಸ್ತಮಿಸುತ್ತಾನೆ ಈ ದೇವತೆಗಳು ಆಗ ಯಾವುದನ್ನು ಆಚರಿಸಿದರೊ ಅದನ್ನೇ ಈಗಲೂ ಆಚರಿಸುತ್ತಾರೆ. ಆದುದರಿಂದ ಮನುಷ್ಯನು ಒಂದೇ ವ್ರತವನ್ನು ಆಚರಿಸಬೇಕು—ಆದುದರಿಂದ ಪಾಪರೂಪಿಯಾದ ಮೃತ್ಯುವು ತನ್ನನ್ನು ಹೊಂದದೆ ಇರಲೆಂದು ಪ್ರಾಣಕ್ರಿಯೆಯನ್ನು ಮಾಡಬೇಕು, ಅಪಾನಕ್ರಿಯೆಯನ್ನೂ ಮಾಡಬೇಕು. ಮತ್ತು ಅದನ್ನು ಆಚರಿಸಿದರೆ ಅದನ್ನು ಪರಿಸಮಾಪ್ತಿಮಾಡಲು ಇಚ್ಛಿಸಬೇಕು.[5] ಈ ವ್ರತದಿಂದ[6] ಅವನು ಈ (ಪ್ರಾಣ) ದೇವತೆಯೊಂದಿಗೆ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ.

[[1] ಅಧ್ಯಾತ್ಮವಾಗಿ ಚಕ್ಷುರೂಪದಲ್ಲಿ ಪ್ರಾಣನಿಂದ ಉದಯಿಸುತ್ತಾನೆ.

[2] ಸಂಧ್ಯೆಯಲ್ಲಿ ವಾಯುವಿನಲ್ಲಿಯೂ ನಿದ್ರಿಸುವಾಗ ಪ್ರಾಣನಲ್ಲಿಯೂ ಎಂದರ್ಥ.

[3] ಪ್ರಾಣವ್ರತವನ್ನೂ ವಾಯುವ್ರತವನ್ನೂ.

[4] ವಾಗಾದಿಗಳು ಮತ್ತು ಅಗ್ನ್ಯಾದಿಗಳು.

[5] ಏಕೆಂದರೆ ಈ ವ್ರತವನ್ನು ಆಚರಿಸದಿದ್ದರೆ ಪ್ರಾಣಕ್ಕೂ ದೇವತೆಗಳಿಗೂ ತಿರಸ್ಕಾರವಾಗುತ್ತದೆ.

[6] 'ಸರ್ವಪ್ರಾಣಿಗಳಲ್ಲಿರುವ ವಾಗಾದಿಗಳೂ ಅಗ್ನ್ಯಾದಿಗಳೂ ನನ್ನ ಸ್ವರೂಪವೇ ಆಗಿರುತ್ತವೆ; ನಾನೇ ಎಲ್ಲವನ್ನೂ ಪರಿಸ್ಪಂದಿಸುವ ಪ್ರಾಣಾತ್ಮನು.']

## ಆರನೆಯ ಬ್ರಾಹ್ಮಣ

**ತ್ರಯಂ ವಾ ಇದಂ—ನಾಮ ರೂಪಂ ಕರ್ಮ; ತೇಷಾಂ ನಾಮ್ನಾಂ ವಾಗಿತ್ಯೇತದೇಷಾಮುಕ್ಥಮ್, ಅತೋ ಹಿ ಸರ್ವಾಣಿ ನಾಮಾನ್ಯುತ್ತಿಷ್ಠಂತಿ। ಏತದೇಷಾಂ ಸಾಮ, ಏತದ್ಧಿ ಸರ್ವೈರ್ನಾಮಭಿಃ ಸಮಮ್; ಏತದೇಷಾಂ ಬ್ರಹ್ಮ, ಏತದ್ಧಿ ಸರ್ವಾಣಿ ನಾಮಾನಿ ಬಿಭರ್ತಿ ॥ ೧ ॥**

ಇದಂ ವೈ=ಈ ಸಮಸ್ತ [ಜಗತ್ತು] ತ್ರಯಂ=ಮೂರಾಗಿದೆ-ನಾಮ ರೂಪಂ ಕರ್ಮ=ನಾಮ ರೂಪ ಮತ್ತು ಕರ್ಮ; ತೇಷಾಂ ಏಷಾಂ ನಾಮ್ನಾಂ=ಆ ಈ ನಾಮಗಳಿಗೆ ವಾಕ್ ಇತಿ ಏತತ್=ವಾಕ್ಕು ಎಂಬ ಇದು ಉಕ್ಥಂ=ಕಾರಣವು, ಅತಃ ಹಿ=ಆದರಿಂದಲೇ ಸರ್ವಾಣಿ ನಾಮಾನಿ=ಎಲ್ಲ ನಾಮಗಳು ಉತ್ತಿಷ್ಠಂತಿ=ಉತ್ಪನ್ನವಾಗುತ್ತವೆ. ಏತತ್=ಇದು ಏಷಾಂ=ಅವುಗಳ ಸಾಮ=ಸಾಮವು, ಏತತ್ ಹಿ=ಇದೇ ಸರ್ವೈಃ ನಾಮಭಿಃ ಸಮಂ=ಎಲ್ಲ ನಾಮಗಳಿಗೂ ಸಾಮಾನ್ಯವಾಗಿವೆ; ಏತತ್=ಇದು ಏಷಾಂ=ಇವುಗಳ ಬ್ರಹ್ಮ=ಬ್ರಹ್ಮವು, ಏತತ್ ಹಿ=ಇದೇ ಸರ್ವಾಣಿ ನಾಮಾನಿ=ಎಲ್ಲ ನಾಮಗಳನ್ನು ಬಿಭರ್ತಿ=ಧರಿಸಿದೆ.

೧. ಈ ಜಗತ್ತೆಲ್ಲ[1] ನಾಮ-ರೂಪ-ಕರ್ಮಗಳೆಂಬ[2] ಮೂರೇ ಆಗಿದೆ. ಆ ಈ ನಾಮಗಳಿಗೆ ವಾಕ್ಕು ಕಾರಣವು,[3] ಏಕೆಂದರೆ ಎಲ್ಲ ನಾಮಗಳು ಅದರಿಂದ ಉತ್ಪನ್ನವಾಗಿವೆ. ಇದು ಇವುಗಳ ಸಾಮವು, ಏಕೆಂದರೆ ಇದು ಎಲ್ಲ ನಾಮಗಳಿಗೂ ಸಾಮಾನ್ಯವಾಗಿದೆ. ಇದು ಇವುಗಳ ಬ್ರಹ್ಮ,[4] ಏಕೆಂದರೆ ಇದು ಎಲ್ಲ ಹೆಸರುಗಳನ್ನು ಧರಿಸಿದೆ.[5]

[1 ಸಾಧ್ಯ-ಸಾಧನ-ಲಕ್ಷಣವುಳ್ಳ ಮತ್ತು ಅವಿದ್ಯೆಯ ವಿಷಯವಾದ ವ್ಯಾಕೃತಾ-ವ್ಯಾಕೃತ ಜಗತ್ತು.

2 ಅನಾತ್ಮವು. ಸಾಕ್ಷಾತ್ತಾಗಿಯೂ ಅಪರೋಕ್ಷವಾಗಿಯೂ ಇರುವ ಬ್ರಹ್ಮವಲ್ಲ. ಇದರಲ್ಲಿ ವಿರಕ್ತನಾಗಬೇಕು ಎಂಬುದು ತಾತ್ಪರ್ಯ.

3 ಶಬ್ದಸಾಮಾನ್ಯವು ನಾಮವಿಶೇಷಗಳಿಗೆ ಕಾರಣವು ಎಂದರ್ಥ.

4 ಆತ್ಮ.

5 ಶಬ್ದಸಾಮಾನ್ಯವು ಶಬ್ದವಿಶೇಷಗಳಾದ ನಾಮಗಳಿಗೆ ಸ್ವರೂಪವನ್ನು ಕೊಟ್ಟು ಧರಿಸಿದೆ. ನಾಮವಿಶೇಷಗಳು ಶಬ್ದಮಾತ್ರವೇ ಎಂಬುದು ತಾತ್ಪರ್ಯ.]

ಅಥ ರೂಪಾಣಾಂ ಚಕ್ಷುರಿತ್ಯೇತದೇಷಾಮುಕ್ಥಮ್, ಅತೋ ಹಿ ಸರ್ವಾಣಿ ರೂಪಾಣ್ಯುತ್ತಿಷ್ಠಂತಿ; ಏತದೇಷಾಂ ಸಾಮ ಏತದ್ಧಿ ಸರ್ವೈ ರೂಪೈಃ ಸಮಮ್; ಏತದೇಷಾಂ ಬ್ರಹ್ಮ, ಏತದ್ಧಿ ಸರ್ವಾಣಿ ರೂಪಾಣಿ ಬಿಭರ್ತಿ || ೨ ||

ಅಥ=ಈಗ ಏಷಾಂ ರೂಪಾಣಾಂ=ಈ ರೂಪಗಳಿಗೆ ಚಕ್ಷುಃ=ಚಕ್ಷುಸ್ಸು ಇತಿ ಏತತ್ ಉಕ್ಥಂ; ಅತಃ ಹಿ ಸರ್ವಾಣಿ ರೂಪಾಣಿ=ರೂಪಗಳು ಉತ್ತಿಷ್ಠಂತಿ ಏತತ್ ಏಷಾಂ ಸಾಮ; ಏತತ್ ಹಿ ಸರ್ವೈಃ ರೂಪೈಃ=ರೂಪಗಳಿಂದ ಸಮಂ; ಏತತ್ ಏಷಾಂ ಬ್ರಹ್ಮ, ಏತತ್ ಹಿ ಸರ್ವಾಣಿ ರೂಪಾಣಿ ಬಿಭರ್ತಿ.

೨. ಈಗ ಈ ರೂಪಗಳಿಗೆ[1] ಚಕ್ಷುಸ್ಸು ಕಾರಣವು, ಏಕೆಂದರೆ ಎಲ್ಲ ರೂಪಗಳು ಅದರಿಂದ ಉತ್ಪನ್ನವಾಗಿವೆ. ಇದು ಇವುಗಳ ಸಾಮವು, ಏಕೆಂದರೆ ಇದು ಎಲ್ಲ ರೂಪಗಳಿಗೂ ಸಾಮಾನ್ಯವಾಗಿದೆ. ಇದು ಇವುಗಳ ಆತ್ಮ, ಏಕೆಂದರೆ ಇದು ಎಲ್ಲ ರೂಪಗಳನ್ನೂ ಧರಿಸಿದೆ.

[[1] ಬಿಳಿ ಕಪ್ಪು ಮೊದಲಾದ ರೂಪಗಳಿಗೆ. ರೂಪಸಾಮಾನ್ಯವನ್ನು ನಾಮ ಸಾಮಾನ್ಯದಂತೆಯೇ ಅನ್ವಯಿಸಿಕೊಳ್ಳಬೇಕು.]

ಅಥ ಕರ್ಮಣಾಮಾತ್ಮೇತ್ಯೇತದೇಷಾಮುಕ್ಥಮ್, ಅತೋ ಹಿ ಸರ್ವಾಣಿ ಕರ್ಮಾಣ್ಯುತ್ತಿಷ್ಠಂತಿ; ಏತದೇಷಾಂ ಸಾಮ, ಏತದ್ಧಿ ಸರ್ವೈಃ ಕರ್ಮಭಿಃ ಸಮಮ್; ಏತದೇಷಾಂ ಬ್ರಹ್ಮ, ಏತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ; ತದೇತತ್ ತ್ರಯಂ ಸದೇಕಮಯಮಾತ್ಮಾ, ಆತ್ಮೋ ಏಕಃ ಸನ್ನೇತತ್ ತ್ರಯಂ; ತದೇತದಮೃತಂ ಸತ್ಯೇನ ಛನ್ನಂ; ಪ್ರಾಣೋ ವಾ ಅಮೃತಂ, ನಾಮರೂಪೇ ಸತ್ಯಂ, ತಾಭ್ಯಾಮಯಂ ಪ್ರಾಣಶ್ಛನ್ನಃ || ೩ ||
ಇತಿ ಷಷ್ಠಂ ಬ್ರಾಹ್ಮಣಮ್ ||

## ಇತಿ ಪ್ರಥಮೋಽಧ್ಯಾಯಃ

ಅಥ ಏಷಾಂ ಕರ್ಮಣಾಂ=ಕರ್ಮಗಳಿಗೆ ಆತ್ಮಾ=ಶರೀರವು ಇತಿ ಏತತ್ ಉಕ್ಥಂ ಅತಃ ಹಿ ಸರ್ವಾಣಿ ಕರ್ಮಾಣಿ=ಕರ್ಮಗಳು ಉತ್ತಿಷ್ಠಂತಿ; ಏತತ್ ಏಷಾಂ ಸಾಮ ಏತತ್ ಹಿ, ಸರ್ವೈಃ ಕರ್ಮಭಿಃ=ಕರ್ಮಗಳಿಂದ ಸಮಂ; ಏತತ್ ಏಷಾಂ ಬ್ರಹ್ಮ, ಏತತ್ ಹಿ ಸರ್ವಾಣಿ ಕರ್ಮಾಣಿ ಬಿಭರ್ತಿ; ತತ್ ಏತತ್ ತ್ರಯಂ

ಸತ್=ಆ ಇದು ತ್ರಯವಾಗಿದ್ದು ಏಕಂ-ಒಂದಾಗಿದೆ—ಅಯಂ ಆತ್ಮಾ=ಈ ಶರೀರ; ಆತ್ಮಾ ಉ ಏಕಃ ಸನ್=ಶರೀರವು ಒಂದೇ ಆಗಿದ್ದರೂ ಏತತ್ ತ್ರಯಂ=ಈ ಮೂರಾಗಿದೆ, ತತ್ ಏತತ್ ಅಮೃತಂ=ಆ ಈ ಅಮೃತವು ಸತ್ಯೇನ=ಸತ್ಯದಿಂದ ಛನ್ನಂ ಮುಚ್ಚಲ್ಪಟ್ಟಿದೆ, ಪ್ರಾಣಃ ವೈ=ಪ್ರಾಣನೇ ಅಮೃತಂ=ಅಮೃತನು, ನಾಮರೂಪೇ=ನಾಮರೂಪಗಳು ಸತ್ಯಂ=ಸತ್ಯವು; ತಾಭ್ಯಾಂ=ಅವುಗಳಿಂದ ಅಯಂ ಪ್ರಾಣಃ=ಈ ಪ್ರಾಣನು ಛನ್ನಃ=ಮುಚ್ಚಲ್ಪಟ್ಟಿದ್ದಾನೆ.

೩. ಈಗ ಈ ಕರ್ಮಗಳಿಗೆ ಶರೀರವು[1] ಕಾರಣವು, ಏಕೆಂದರೆ ಎಲ್ಲ ಕರ್ಮಗಳು ಅದರಿಂದ ಉತ್ಪನ್ನವಾಗಿವೆ. ಇದು ಇವುಗಳ ಸಾಮವು; ಏಕೆಂದರೆ ಇದು ಎಲ್ಲ ಕರ್ಮಗಳಿಗೂ ಸಾಮಾನ್ಯವಾಗಿದೆ. ಇದು ಇವುಗಳ ಆತ್ಮ, ಏಕೆಂದರೆ ಇದು ಎಲ್ಲ ಕರ್ಮಗಳನ್ನೂ ಧರಿಸಿದೆ. ಆ ಇದು ತ್ರಯವಾಗಿದ್ದು ಒಂದಾಗಿದೆ[2]—ಈ ಶರೀರ;[3] ಶರೀರವು ಒಂದೇ ಆಗಿದ್ದರೂ ಈ ಮೂರಾಗಿದೆ.[4] ಈ ಅಮೃತವು[5] ಸತ್ಯದಿಂದ[6] ಮುಚ್ಚಲ್ಪಟ್ಟಿದೆ. ಪ್ರಾಣನೇ ಅಮೃತನು, ನಾಮರೂಪಗಳು ಸತ್ಯ; (ಆದುದರಿಂದ) ಈ ಪ್ರಾಣನು ಅವುಗಳಿಂದ ಮುಚ್ಚಲ್ಪಟ್ಟಿದ್ದಾನೆ.[7]

[ಈಗ ಮನನ-ದರ್ಶನ-ರೂಪವಾಗಿರುವ ಮತ್ತು ಚಲನರೂಪವಾಗಿರುವ ಸರ್ವ ಕರ್ಮವಿಶೇಷಗಳೂ ಕ್ರಿಯಾಸಾಮಾನ್ಯದಲ್ಲಿ ಅಡಗುವುವೆಂದು ಹೇಳಲ್ಪಡುತ್ತದೆ.

1 ಶರೀರದಲ್ಲಿ ಕರ್ಮವು ವ್ಯಕ್ತವಾಗುವುದರಿಂದ ಶಾರೀರಕ ಕರ್ಮಗಳನ್ನೇ ಶರೀರವೆಂದು ಕರೆದಿದೆ.

2 ನಾಮ ರೂಪ-ಕರ್ಮಗಳು ಒಂದಕ್ಕೊಂದು ಆಶ್ರಯವಾಗಿ, ಪರಸ್ಪರ ಅಭಿವ್ಯಕ್ತಿಗೆ ಕಾರಣವಾಗಿ, ಒಂದರಲ್ಲೊಂದು ಲಯವಾಗುವುದಾಗಿ, ಪರಸ್ಪರ ಆಶ್ರಯಿಸಿರುವ ಮೂರು ಕೋಲುಗಳಂತೆ ಒಂದಾಗಿರುತ್ತವೆ.

3 ಕಾರ್ಯಕರಣರೂಪವಾದ ಸಂಘಾತ.

4 ಅಧ್ಯಾತ್ಮ ಅಧಿಭೂತ ಅಧಿದೈವ ಎಂಬ ರೂಪದಿಂದ.

5 ಒಳಗೆ ಆತ್ಮಭೂತವಾಗಿರುವ ಪ್ರಾಣ.

6 ಕಾರ್ಯಾತ್ಮಕವೂ ನಾಮರೂಪವೂ ಆದ ಶರೀರದಿಂದ.

7 ಅವಿದ್ಯಾವಿಷಯವಾದ ಸಂಸಾರತತ್ತ್ವವನ್ನು ಹೇಳಿದ್ದಾಯಿತು. ಇನ್ನು ವಿದ್ಯಾವಿಷಯನಾದ ಆತ್ಮನನ್ನು ಅರಿತುಕೊಳ್ಳಲು ಮುಂದಿನ ಅಧ್ಯಾಯವು ಆರಂಭಿಸಲ್ಪಟ್ಟಿದೆ.]

# ಎರಡನೆಯ ಅಧ್ಯಾಯ

## ಮೊದಲನೆಯ ಬ್ರಾಹ್ಮಣ

**ಓಮ್ । ದೃಪ್ತಬಾಲಾಕಿರ್ಹಾನೂಚಾನೋ ಗಾರ್ಗ್ಯ ಆಸ, ಸ ಹೋವಾಚಾಜಾತಶತ್ರುಂ ಕಾಶ್ಯಂ, ಬ್ರಹ್ಮ ತೇ ಬ್ರವಾಣೀತಿ; ಸ ಹೋವಾಚಾಜಾತಶತ್ರುಃ, ಸಹಸ್ರಮೇತಸ್ಯಾಂ ವಾಚಿ ದದ್ಮಃ, ಜನಕೋ ಜನಕ ಇತಿ ವೈ ಜನಾ ಧಾವಂತೀತಿ ॥ ೧ ॥**

ಓಂ. ದೃಪ್ತಬಾಲಾಕಿಃ=ದೃಪ್ತಬಾಲಾಕಿ [ಎಂಬ ಹೆಸರಿನ] ಅನೂಚಾನಃ=ವಾಗ್ಮಿಯಾದ ಗಾರ್ಗ್ಯಃ=ಗಾರ್ಗ್ಯನು ಆಸ ಹ=ಇದ್ದನು, ಸಃ ಹ=ಅವನು ಕಾಶ್ಯಂ=ಕಾಶೀರಾಜನಾದ ಅಜಾತಶತ್ರುಂ=ಅಜಾತಶತ್ರುವನ್ನು ಕುರಿತು ಉವಾಚ=ಹೇಳಿದನು: ತೇ=ನಿನಗೆ ಬ್ರಹ್ಮ=ಬ್ರಹ್ಮವನ್ನು ಬ್ರವಾಣಿ=ಹೇಳುತ್ತೇನೆ ಇತಿ=ಎಂದು. ಸಃ ಅಜಾತಶತ್ರುಃ=ಆ ಅಜಾತಶತ್ರುವು ಉವಾಚ ಹ=ಹೇಳಿದನು: ಏತಸ್ಯಾಂ ವಾಚಿ=ಈ ಮಾತಿಗೆ [ಗವಾಂ] ಸಹಸ್ರಂ=ಗೋಸಹಸ್ರವನ್ನು ದದ್ಮಃ=ಕೊಡುತ್ತೇವೆ; ಜನಕಃ=ಜನಕ ಜನಕಃ=ಜನಕ ಇತಿ=ಎಂದು ಜನಾಃ=ಜನರು ಧಾವಂತಿ ವೈ=ಧಾವಿಸುತ್ತಾರೆ.

೧. ಓಂ. ದೃಪ್ತಬಾಲಾಕಿ[1] (ಎಂಬ ಹೆಸರಿನಿಂದ) ವಾಗ್ಮಿಯಾದ ಗಾರ್ಗ್ಯನಿದ್ದನು.[2] ಅವನು ಕಾಶೀರಾಜನಾದ ಅಜಾತಶತ್ರುವನ್ನು ಕುರಿತು 'ನಾನು ನಿನಗೆ ಬ್ರಹ್ಮೋಪದೇಶವನ್ನು ಮಾಡುತ್ತೇನೆ' ಎಂದು ಹೇಳಿದನು. '(ನಿನ್ನ) ಈ ಮಾತಿಗೆ ಗೋಸಹಸ್ರವನ್ನು ಕೊಡುತ್ತೇವೆ; ಜನರು "ಜನಕ, ಜನಕ" ಎಂದು ಧಾವಿಸುತ್ತಾರೆ. (ನಾನೂ ಕೂಡ ಅವನಂತೆಯೇ)' ಎಂದು ಅಜಾತಶತ್ರುವು ಹೇಳಿದನು.[3]

[ಹಿಂದಿನ ಅಧ್ಯಾಯದಲ್ಲಿ ಅವಿದ್ಯಾವಿಷಯವಾದ ಪ್ರಾಣವು ಭಿನ್ನ ಭಿನ್ನ ಆಧಾರಗಳಲ್ಲಿ ಅನೇಕ ವಿಧವಾಗಿ ವ್ಯಾಪಿಸಿಕೊಂಡು, ವಿರಾಟ್ ವೈಶ್ವಾನರ ಪ್ರಜಾಪತಿ ಹಿರಣ್ಯಗರ್ಭ ಮೊದಲಾದ ಹೆಸರುಗಳಿಂದ ಕರೆಯಿಸಿಕೊಂಡು, ಏಕವೂ ಅನೇಕವೂ ಆಗಿದೆ ಎಂದು ಹೇಳಿದ್ದಾಯಿತು. ಬ್ರಹ್ಮವೆಂದರೆ ಇಷ್ಟೇ; ಇದಕ್ಕಿಂತ ಹೆಚ್ಚಿನದಿಲ್ಲ. ಈ ಬ್ರಹ್ಮವೇ ಬೇರೆ ಬೇರೆ ಶರೀರಗಳಲ್ಲಿ ಪರಿಸಮಾಪ್ತವಾಗಿ ಚೇತನವೂ ಕರ್ತೃವೂ ಭೋಕ್ತೃವೂ ಆದ ಆತ್ಮ ಎಂದು ಕೆಲವರು ಅರಿತಿರುತ್ತಾರೆ. ಇದು ಗಾರ್ಗ್ಯನೆಂಬ ಬ್ರಾಹ್ಮಣನ ಮತವಾಗಿತ್ತು. ಇದಕ್ಕೆ ವಿರುದ್ಧವಾಗಿದ್ದ ಆತ್ಮವಾದವನ್ನು ಅಜಾತ

ಶತ್ರುವು ಒಪ್ಪಿಕೊಂಡಿದ್ದನು. ಅಜಾತಶತ್ರುವಿನ ಮತದ ಪ್ರಕಾರ ಬ್ರಹ್ಮವಸ್ತುವು ಅನಾತ್ಮವಸ್ತುಗಳಿಗಿಂತ ವಿಲಕ್ಷಣವೂ ಅಪರಿಚ್ಛಿನ್ನವೂ ನಿರುಪಾಧಿಕವೂ ನಿರ್ವಿಶೇಷವೂ ಅದ್ವಿತೀಯವೂ ಆಗಿದೆ. ಮುಮುಕ್ಷುಗಳು ಸುಲಭವಾಗಿ ಅರಿತುಕೊಳ್ಳಲು ಬ್ರಹ್ಮವಿದ್ಯಾವಿಷಯವು ಗಾರ್ಗ್ಯ-ಅಜಾತಶತ್ರುಗಳ ಸಂವಾದರೂಪದಲ್ಲಿದೆ. ಈ ಆಖ್ಯಾಯಿಕೆಯಿಂದ ಆಚಾರವಿಧಿಯನ್ನೂ ಬ್ರಹ್ಮಜ್ಞಾನಕ್ಕೆ ಶ್ರದ್ಧೆಯು ಪರಮಸಾಧನವೆಂಬುದನ್ನೂ ಅರಿತುಕೊಳ್ಳಬಹುದು.

[1] ಬಲಾಕಾ ಎಂಬವಳ ಮಗನು ಬಾಲಾಕಿ. ದೃಪ್ತ ಎಂದರೆ ಗರ್ವಿತನು ಎಂದರ್ಥ. ಇವನು ಬ್ರಹ್ಮವನ್ನು ಸರಿಯಾಗಿ ತಿಳಿಯದೆ ಇದ್ದುದರಿಂದ ಗರ್ವವುಳ್ಳವನಾಗಿದ್ದನು. ಆದುದರಿಂದ ಇವನಿಗೆ ದೃಪ್ತಬಾಲಾಕಿ ಎಂಬ ಹೆಸರು ಇದ್ದಿತು.

[2] ಗರ್ಗಗೋತ್ರಕ್ಕೆ ಸೇರಿದುದರಿಂದ ಗಾರ್ಗ್ಯನು.

[3] ಜನರು ಜನಕನ ದಾನ, ಶ್ರವಣೇಚ್ಛೆ ಮೊದಲಾದುವುಗಳನ್ನು ಕೇಳಿ ಅವನಿರುವಲ್ಲಿಗೆ ಓಡುತ್ತಾರೆ. ನನ್ನಲ್ಲಿಯೂ ಜನಕನ ಗುಣಗಳಿವೆ ಮತ್ತು ಅವುಗಳ ಪ್ರದರ್ಶಕ್ಕೆ ಒಂದು ಅವಕಾಶವನ್ನು ಕಲ್ಪಿಸಿರುತ್ತೀಯೆ. ಆದುದರಿಂದ ಬ್ರಹ್ಮವಿಷಯನನ್ನು ಕೇಳುವುದಕ್ಕೆ ಮೊದಲೇ ಗೋಸಹಸ್ರವನ್ನು ಕೊಡುತ್ತೇನೆ ಎಂಬುದು ಅಜಾತಶತ್ರುವಿನ ಅಭಿಪ್ರಾಯ.]

**ಸ ಹೋವಾಚ ಗಾರ್ಗ್ಯಃ, ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜೇತಿ ವಾ ಅಹಮೇತಮುಪಾಸ ಇತಿ; ಸ ಯ ಏತಮೇವಮುಪಾಸ್ತೇಽತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ ॥ ೨ ॥**

ಸಃ ಗಾರ್ಗ್ಯಃ ಉವಾಚ ಹ = ಆ ಗಾರ್ಗ್ಯನು ಹೇಳಿದನು: ಯಃ ಏವ ಅಸೌ ಪುರುಷಃ = ಯಾವ ಈ ಪುರುಷನು ಆದಿತ್ಯೇ = ಆದಿತ್ಯನಲ್ಲಿ [ಇರುವನೋ] ಏತಂ ಏವ = ಇವನನ್ನೇ ಅಹಂ = ನಾನು ಬ್ರಹ್ಮ ಉಪಾಸೇ = ಬ್ರಹ್ಮವೆಂದು ಉಪಾಸಿಸುತ್ತೇನೆ; ಸಃ ಅಜಾತಶತ್ರುಃ ಉವಾಚ ಹ = ಆ ಅಜಾತಶತ್ರುವು ಹೇಳಿದನು: ಏತಸ್ಮಿನ್ = ಈ ಬ್ರಹ್ಮವಿಷಯದಲ್ಲಿ ಮಾ ಮಾ ಸಂವದಿಷ್ಠಾಃ = ಮಾತನಾಡಬೇಡ, ಅತಿಷ್ಠಾಃ = ಅತಿಷ್ಠನು ಸರ್ವೇಷಾಂ ಭೂತಾನಾಂ = ಸರ್ವ ಪ್ರಾಣಿಗಳಿಗೂ ಮೂರ್ಧಾ = ಶಿರಃಪ್ರಾಯನು ರಾಜಾ = ದೀಪ್ತಿವಂತನು ಇತಿ = ಎಂದು; ಏತಂ ವೈ = ಇವನನ್ನೇ ಅಹಂ = ನಾನು ಉಪಾಸೇ = ಉಪಾಸಿಸುತ್ತೇನೆ ಇತಿ = ಎಂದು; ಸಃ ಯಃ = ಆ ಯಾವನು ಏತಂ = ಇವನನ್ನು ಏವಂ = ಹೀಗೆ ಉಪಾಸ್ತೇ = ಉಪಾಸಿಸುತ್ತಾನೆಯೋ [ಅವನು] ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ.

೨. ಗಾರ್ಗ್ಯ : 'ಆದಿತ್ಯನಲ್ಲಿರುವ ಈ ಪುರುಷನನ್ನೇ ಬ್ರಹ್ಮವೆಂದು ನಾನು ಉಪಾಸಿಸುತ್ತೇನೆ.[1]

ಅಜಾತಶತ್ರು : 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ: ಅತಿಷ್ಠನೆಂದೂ[2] ಸರ್ವಪ್ರಾಣಿಗಳಿಗೆ ಶಿರಃಪ್ರಾಯನೆಂದೂ ದೀಪ್ತಿವಂತನೆಂದೂ[3] ಇವನನ್ನೇ ಉಪಾಸಿಸುತ್ತೇನೆ.'[4]

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ (ಅವನು) ಅತಿಷ್ಠನೂ ಸರ್ವಪ್ರಾಣಿಗಳಿಗೆ ಶಿರಃಪ್ರಾಯನೂ ದೀಪ್ತಿವಂತನೂ ಆಗುವನು.

[[1] 'ಆದಿತ್ಯನಲ್ಲಿಯೂ ಚಕ್ಷುಸ್ಸಿನಲ್ಲಿಯೂ ಒಬ್ಬನೇ ಅಭಿಮಾನಿಯಾಗಿರುವ, ಚಕ್ಷು-ದ್ವಾರದಿಂದ ಹೃದಯದಲ್ಲಿ ಪ್ರವಿಷ್ಟನಾಗಿ "ನಾನು ಭೋಕ್ತೃ, ಕರ್ತೃ" ಎಂದು ಅವಸ್ಥಿತನಾಗಿರುವ ಇವನನ್ನೇ ಈ ಕಾರ್ಯಕರಣಸಂಘಾತದಲ್ಲಿ ಬ್ರಹ್ಮವೆಂದು ಅರಿತಿರುತ್ತೇನೆ' ಎಂಬುದು ಗಾರ್ಗ್ಯನ ಅಭಿಪ್ರಾಯ. ಚಕ್ಷುರಿಂದ್ರಿಯಕ್ಕೆ ಅನುಗ್ರಾಹಕನಾದ ಆದಿತ್ಯನೇ ಹೃದಯದಲ್ಲಿ ಕರ್ತೃ-ಭೋಕ್ತೃವಾಗಿರುವವನು ಎಂಬುದು ಈ ಪ್ರತಿಜ್ಞಾವಾಕ್ಯದ ತಾತ್ಪರ್ಯ.

[2] ಸರ್ವ ಪ್ರಾಣಿಗಳನ್ನೂ ಮೀರಿರುವುದರಿಂದ ಅತಿಷ್ಠನು, ಅತೀತ್ಯ ಭೂತಾನಿ ತಿಷ್ಠತೀತಿ ಅತಿಷ್ಠಾಃ.

[3] ದೀಪ್ತಿಗುಣದಿಂದ ಕೂಡಿರುವುದರಿಂದ ರಾಜನು.

[4] 'ಈ ಬ್ರಹ್ಮವಿಷಯದಲ್ಲಿ ನಾವಿಬ್ಬರೂ ಸಮಾನವಾಗಿ ತಿಳಿದಿದ್ದೇವೆ. ಆದರೂ ನಮಗೆ ತಿಳಿದಿಲ್ಲವೆಂಬಂತೆ ಮಾತನಾಡುತ್ತೀಯೆ. ಆದುದರಿಂದ ಚರ್ಚಿಸಬೇಡ. ನಿನಗೆ ಬೇರೆ ಬ್ರಹ್ಮವು ತಿಳಿದಿದ್ದರೆ ಹೇಳು. ನನಗೆ ನೀನು ಹೇಳುವ ಬ್ರಹ್ಮದ ವಿಶೇಷಣಗಳೂ ಉಪಾಸನಾಫಲಗಳೂ ತಿಳಿದಿವೆ' ಎಂಬುದು ಅಜಾತಶತ್ರುವಿನ ಅಭಿಪ್ರಾಯ.

[5] ಫಲವು ಉಪಾಸನೆಗೆ ತಕ್ಕಂತೆ ಆಗುವುದು. 'ಅವನನ್ನು ಹೇಗೆ ಉಪಾಸಿಸುತ್ತಾನೆಯೊ ಹಾಗೆಯೇ ಆಗುತ್ತಾನೆ' ತಂ ಯಥಾ ಯಥೋಪಾಸತೇ ತದೇವ ಭವತಿ (ಶ. ಬ್ರಾ. ೧೦, ೫, ೨, ೨೦). ]

ಸ ಹೋವಾಚ ಗಾರ್ಗ್ಯಃ, ಯ ಏವಾಸೌ ಚಂದ್ರೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಬೃಹನ್ ಪಾಂಡರವಾಸಾಃ ಸೋಮೋ ರಾಜೇತಿ ವಾ ಅಹಮೇತಮುಪಾಸ ಇತಿ ; ಸ ಯ ಏತಮೇವಮುಪಾಸ್ತೇಽಹರಹರ್ಹ ಸುತಃ ಪ್ರಸುತೋ ಭವತಿ, ನಾಸ್ಯಾನ್ನಂ ಕ್ಷೀಯತೇ ॥ ೩ ॥

ಚಂದ್ರೇ=ಚಂದ್ರನಲ್ಲಿ, ಬೃಹನ್ =ಮಹಾನ್; ಪಾಂಡರವಾಸಾಃ= ಶ್ವೇತಾಂಬರ ಧಾರಿಯು; ಸೋಮಃ ರಾಜಾ=ಸೋಮರಾಜನು; ಅಹಃ ಅಹಃ=ಪ್ರತಿದಿನವೂ ಸುತಃ ಪ್ರಸುತಃ ಭವತಿ ಹ=ಪ್ರಕೃತಿ-ವಿಕೃತಿ-ಯಜ್ಞಗಳಲ್ಲಿ ಯಥೇಷ್ಟವಾಗಿ ಹಿಂಡಲ್ಪಡುವುದು; ಅಸ್ಯ= ಇವನಿಗೆ ಅನ್ನಂ ನ ಕ್ಷೀಯತೇ=ಅನ್ನವು ಕ್ಷಯಿಸುವುದಿಲ್ಲ. [ಉಳಿದುದು ಹಿಂದಿನಂತೆಯೇ.]

೩. ಗಾರ್ಗ್ಯ : 'ಚಂದ್ರನಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು : 'ಈ ವಿಷಯದಲ್ಲ ಹೀಗೆ ಮಾತನಾಡಬೇಡ : ಮಹಾನ್ ಎಂದೂ, ಶ್ವೇತಾಂಬರಧಾರಿಯೆಂದೂ[2], ಸೋಮರಾಜನೆಂದೂ[3] ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ (ಅವನಿಗೆ ಯಜ್ಞಗಳಲ್ಲಿ ಯಜ್ಞವಿಕೃತಿಗಳಲ್ಲಿ) ಯಥೇಷ್ಟವಾಗಿ (ಸೋಮವು) ಹಿಂಡಲ್ಪಡುವುದು ; ಇವನಿಗೆ ಅನ್ನವು ಕ್ಷಯಿಸುವುದಿಲ್ಲ.

[[1] ಮತ್ತು ಮನಸ್ಸಿನಲ್ಲಿರುವ.
[2] ಚಂದ್ರಾಭಿಮಾನಿಯಾದ ಪ್ರಾಣನು ಅಪ್-ಶರೀರಿಯಾದುದರಿಂದ.
[3] ಚಂದ್ರನನ್ನು ಮತ್ತು ರಸವನ್ನು ಕೊಡುವ ಸೋಮಲತೆಯನ್ನು.]

**ಸ ಹೋವಾಚ ಗಾರ್ಗ್ಯಃ, ಯ ಏವಾಸೌ ವಿದ್ಯುತಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ ಮಾ ಮೈತಸ್ಮಿನ್ ಸಂವದಿಷ್ಠಾಃ, ತೇಜಸ್ವೀತಿ ವಾ ಅಹಮೇತಮುಪಾಸ ಇತಿ ; ಸ ಯ ಏತಮೇವಮುಪಾಸ್ತೇ ತೇಜಸ್ವೀ ಹ ಭವತಿ ತೇಜಸ್ವಿನೀ ಹಾಸ್ಯ ಪ್ರಜಾ ಭವತಿ ॥ ೪ ॥**

ವಿದ್ಯುತಿ=ವಿದ್ಯುತ್ತಿನಲ್ಲಿ; ತೇಜಸ್ವೀ=ತೇಜಸ್ವಿ; ಅಸ್ಯ ಪ್ರಜಾ=ಇವನ ಸಂತಾನವು ತೇಜಸ್ವಿನೀ ಭವತಿ= ತೇಜಸ್ವಿಯಾಗುತ್ತದೆ. [ಉಳಿದುದು ಹಿಂದಿನಂತೆಯೇ.]

೪. ಗಾರ್ಗ್ಯ : 'ವಿದ್ಯುತ್ತಿನಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು : 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ ; ತೇಜಸ್ವಿಯೆಂದು ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ತೇಜಸ್ವಿಯಾಗುತ್ತಾನೆ ಮತ್ತು ಅವನ ಸಂತಾನವು ತೇಜಸ್ವಿಯಾಗುತ್ತದೆ.

[1 ಮತ್ತು ತ್ವಕ್ಕಿನಲ್ಲಿಯೂ ಹೃದಯದಲ್ಲಿಯೂ ಇರುವ.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಮಾಕಾಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಪೂರ್ಣಮಪ್ರವರ್ತೀತಿ ವಾ ಅಹಮೇತಮುಪಾಸ ಇತಿ; ಸ ಯ ಏತಮೇವಮುಪಾಸ್ತೇ ಪೂರ್ಯತೇ ಪ್ರಜಯಾ ಪಶುಭಿಃ, ನಾಸ್ಯಾಸ್ಮಾಲ್ಲೋಕಾತ್ ಪ್ರಜೋದ್ವರ್ತತೇ ॥ ೫ ॥**

ಆಕಾಶೇ=ಆಕಾಶದಲ್ಲಿ; ಪೂರ್ಣಂ=ಪೂರ್ಣನು; ಅಪ್ರವರ್ತಿ=ನಿಷ್ಕ್ರಿಯನು; ಪ್ರಜಯಾ=ಸಂತತಿಯಿಂದಲೂ ಪಶುಭಿಃ=ಪಶುಗಳಿಂದಲೂ ಪೂರ್ಯತೇ=ಸಮೃದ್ಧನಾಗುತ್ತಾನೆ, ಅಸ್ಯ=ಇವನ ಪ್ರಜಾ=ಸಂತತಿಯು ಅಸ್ಮಾತ್ ಲೋಕಾತ್ ನ ಉದ್ವರ್ತತೇ=ಹೋಗುವುದಿಲ್ಲ. [ಉಳಿದುದು ಹಿಂದಿನಂತೆಯೇ.]

೫. ಗಾರ್ಗ್ಯ: 'ಆಕಾಶದಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು: 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಪೂರ್ಣನೆಂದೂ ನಿಷ್ಕ್ರಿಯನೆಂದೂ ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಸಂತತಿಯಿಂದಲೂ ಪಶುಗಳಿಂದಲೂ ಸಮೃದ್ಧನಾಗುತ್ತಾನೆ[2] ಮತ್ತು ಅವನ ಸಂತತಿಯು ಈ ಲೋಕದಲ್ಲಿ ವಿಚ್ಛಿನ್ನವಾಗುವುದಿಲ್ಲ.[3]

[1 ಹೃದಯಾಕಾಶದಲ್ಲಿ.

2 ಇದು ಪೂರ್ಣತ್ವ-ವಿಶೇಷಣದ ಫಲ.

3 ಇದು ಅಪ್ರವರ್ತಿ-ವಿಶೇಷಣದ ಫಲ.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಂ ವಾಯೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತ-**

ಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಇಂದ್ರೋ ವೈಕುಂಠೋ-ಽಪರಾಜಿತಾ ಸೇನೇತಿ ವಾ ಅಹಮೇತಮುಪಾಸ ಇತಿ; ಸ ಯ ಏತಮೇವಮುಪಾಸ್ತೇ ಜಿಷ್ಣುರ್ಹಾಪರಾಜಿಷ್ಣುರ್ಭವತ್ಯನ್ಯತಸ್ತ್ಯ-ಜಾಯೀ ॥ ೬ ॥

ವಾಯೌ=ವಾಯುವಿನಲ್ಲಿ ; ಇಂದ್ರಃ=ಇಂದ್ರನು ; ವೈಕುಂಠಃ=ವೈಕುಂಠನು ; ಅಪರಾಜಿತಾ ಸೇನಾ=ಪರಾಜಯವಿಲ್ಲದ ಸೇನೆ ; ಜಿಷ್ಣುಃ=ಜಯಶೀಲನೂ ಅಪರಾ-ಜಿಷ್ಣುಃ=ಅಪರಾಜಿತನೂ ಅನ್ಯ-ತಸ್ತ್ಯ-ಜಾಯೀ=ಶತ್ರುದಮನನೂ ಭವತಿ ಹ= ಆಗುತ್ತಾನೆ. [ಉಳಿದುದು ಹಿಂದಿನಂತೆಯೇ.]

೬. ಗಾರ್ಗ್ಯ : 'ವಾಯುವಿನಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು : 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಇಂದ್ರನೆಂದೂ[2] ವೈಕುಂಠನೆಂದೂ[3] ಪರಾಜಯವಿಲ್ಲದ ಸೇನೆಯೆಂದೂ[4] ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಜಯಶೀಲನೂ ಅಪರಾಜಿತನೂ ಶತ್ರುದಮನನೂ ಆಗುತ್ತಾನೆ.

[[1] ಮತ್ತು ಪ್ರಾಣದಲ್ಲಿಯೂ ಹೃದಯದಲ್ಲಿಯೂ.

[2] ಪರಮೇಶ್ವರನೆಂದೂ.

[3] ಅದಮ್ಯ ಅಥವಾ ದುರಾಧರ್ಷನು ಎಂದೂ.

[4] ಮರುತ್ತುಗಳು ಗುಣವಾಗಿರುವುದರಿಂದ 'ಸೇನೆ' ಎಂದು ಹೇಳಿದೆ.]

ಸ ಹೋವಾಚ ಗಾರ್ಗ್ಯಃ, ಯ ಏವಾಯಮಗ್ನೌ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ ಮಾ ಮೈತಸ್ಮಿನ್ ಸಂವದಿಷ್ಠಾಃ, ವಿಷಾಸಹಿರಿತಿ ವಾ ಅಹಮೇ-ತಮುಪಾಸ ಇತಿ; ಸ ಯ ಏತಮೇವಮುಪಾಸ್ತೇ ವಿಷಾಸಹಿರ್ಹ ಭವತಿ, ವಿಷಾಸಹಿರ್ಹಾಸ್ಯ ಪ್ರಜಾ ಭವತಿ ॥ ೭ ॥

ಅಗ್ನೌ=ಅಗ್ನಿಯಲ್ಲಿ, ವಿಷಾಸಹಿಃ=ಸಹಿಷ್ಣುವು ಇತಿ=ಎಂದು [ಉಳಿದುದು ಹಿಂದಿನಂತೆಯೇ.]

೭. ಗಾರ್ಗ್ಯ : 'ಅಗ್ನಿಯಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು: 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಸಹಿಷ್ಣುವೆಂದು[2] ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಸಹಿಷ್ಣುವಾಗುತ್ತಾನೆ ಮತ್ತು ಅವನ ಸಂತತಿಯು ಸಹಿಷ್ಣುವಾಗುತ್ತದೆ.

[[1] ಮತ್ತು ವಾಕ್ಕಿನಲ್ಲಿಯೂ ಹೃದಯದಲ್ಲಿಯೂ.

[2] ವಿಷಾಸಹಿ ಎಂಬ ಪದದ ಅರ್ಥವು ಹೀಗೆ ಆಗಿರುತ್ತದೆ: ಅಗ್ನಿಯಲ್ಲಿ ಹವಿಸ್ಸನ್ನು ಹಾಕುವಾಗ (ವಿಷ್ಯತೇ) ಅದು ಹವಿಸ್ಸನ್ನು ಭಸ್ಮಮಾಡಿ ಸಹಿಸುವುದು; ಆದುದರಿಂದ ಅಗ್ನಿಯ ಹೆಸರು ವಿಷಾಸಹಿ.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಮಪ್ಸು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಪ್ರತಿರೂಪ ಇತಿ ವಾ ಅಹಮೇತಮುಪಾಸ ಇತಿ; ಸ ಯ ಏತಮೇವಮುಪಾಸ್ತೇ ಪ್ರತಿರೂಪಂ ಹೈವೈನಮುಪಗಚ್ಛತಿ, ನಾಪ್ರತಿರೂಪಮ್, ಅಥೋ ಪ್ರತಿರೂಪೋಽಸ್ಮಾಜ್ಜಾಯತೇ ॥ ೮ ॥**

ಅಪ್ಸು=ನೀರಿನಲ್ಲಿ, ಪ್ರತಿರೂಪಃ=ಅನುರೂಪನು; ಪ್ರತಿರೂಪಂ ಏವ=ಅನುರೂಪವೇ ಏನಂ=ಇವನನ್ನು ಉಪಗಚ್ಛತಿ=ಬಂದು ಸೇರುತ್ತದೆ. ನ ಅಪ್ರತಿರೂಪಂ=ಅಪ್ರತಿರೂಪವಾದುದು ಬರುವುದಿಲ್ಲ; ಅಥೋ=ಮತ್ತು ಅಸ್ಮಾತ್=ಇವನಿಂದ ಪ್ರತಿರೂಪಃ=ಅನುಕೂಲವಾದ [ಸಂತತಿಯು] ಜಾಯತೇ=ಉಂಟಾಗುತ್ತದೆ. [ಉಳಿದುದು ಹಿಂದಿನಂತೆಯೇ.]

೮. ಗಾರ್ಗ್ಯ : 'ನೀರಿನಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು : 'ಈ ವಿಷಯದಲ್ಲಿ ಹೀಗ ಮಾತನಾಡಬೇಡ. ಅನುರೂಪನೆಂದು[2] ಇವನನ್ನೇ ನಾನು ಉಪಾಸಿಸುತ್ತೇನೆ'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನ ಬಳಿಗೆ ಅನುರೂಪವಾದ ವಸ್ತುಗಳು ಬರುತ್ತವೆ, ಅಪ್ರತಿರೂಪವಾದುದು ಬರುವುದಿಲ್ಲ ಮತ್ತು ಇವನಿಗೆ ಅನುರೂಪವಾದ ಸಂತತಿ ಹುಟ್ಟುತ್ತದೆ.

[[1] ಮತ್ತು ರೇತಸ್ಸಿನಲ್ಲಿಯೂ ಹೃದಯದಲ್ಲಿಯೂ
[2] ಶ್ರುತಿಸ್ಮೃತಿಗಳಿಗೆ ಪ್ರತಿಕೂಲನಲ್ಲದವನು.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಮಾದರ್ಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತ-ಶತ್ರುಃ ಮಾ ಮೈತಸ್ಮಿನ್ ಸಂವದಿಷ್ಠಾಃ, ರೋಚಿಷ್ಣುರಿತಿ ವಾ ಅಹಮೇತಮುಪಾಸ ಇತಿ, ಸ ಯ ಏತಮೇವಮುಪಾಸ್ತೇ ರೋಚಿಷ್ಣುರ್ಹ ಭವತಿ ರೋಚಿಷ್ಣುರ್ಹಾಸ್ಯ ಪ್ರಜಾ ಭವತಿ, ಅಥೋ ಯೈಃ ಸನ್ನಿಗಚ್ಛತಿ ಸರ್ವಾಂಸ್ತಾನತಿರೋಚತೇ ॥ ೯ ॥**

ಆದರ್ಶೇ=ಕನ್ನಡಿಯಲ್ಲಿ, ರೋಚಿಷ್ಣುಃ=ದೀಪ್ತಿಸ್ವಭಾವನು; ಅಥೋ=ಮತ್ತು ಯೈಃ=ಯಾರೊಂದಿಗೆ ಸನ್ನಿಗಚ್ಛತಿ=ಒಂದುಗೂಡುತ್ತಾನೆಯೊ ತಾನ್=ಸರ್ವಾನ್=ಅವರೆಲ್ಲರನ್ನೂ ಅತಿರೋಚತೇ=ಅತಿಕ್ರಮಿಸಿ ಪ್ರಕಾಶಿಸುತ್ತಾನೆ. [ಉಳಿದುದು ಹಿಂದಿನಂತೆಯೇ.]

೯. ಗಾರ್ಗ್ಯ: 'ಕನ್ನಡಿಯಲ್ಲಿರುವ[1] ಈ ಪುರುಷನನ್ನೆ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು: 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ದೀಪ್ತಿಸ್ವಭಾವನೆಂದು ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ದೀಪ್ತಿಸ್ವಭಾವದವನಾಗುತ್ತಾನೆ ಮತ್ತು ಅವನ ಸಂತತಿಯು ದೀಪ್ತಿಸ್ವಭಾವವುಳ್ಳದ್ದಾಗುತ್ತದೆ; ಇವನು ಯಾರೊಂದಿಗೆ ಒಡಗೂಡುತ್ತಾನೆಯೊ ಅವರನ್ನೆಲ್ಲ ಅತಿಕ್ರಮಿಸಿ ಪ್ರಕಾಶಿಸುತ್ತಾನೆ.

[[1] ಪ್ರಕಾಶಸ್ವಭಾವವುಳ್ಳ ಕತ್ತಿ ಮೊದಲಾದುವುಗಳಲ್ಲಿ ಮತ್ತು ಶುದ್ಧವಾದ ಹೃದಯದಲ್ಲಿ.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಂ ಯಂತಂ ಪಶ್ಚಾ-ಚ್ಛಬ್ದೋಽನೂದೇತ್ಯೇತಮೇವಾಹಂ ಬ್ರಹ್ಮೋಪಾಸ ಇತಿ; ಸ**

**ಹೋವಾಚಾಜಾತಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಅಸುರಿತಿ ವಾ ಅಹಮೇತಮುಪಾಸ ಇತಿ ಸ ಯ ಏತಮೇವ-ಮುಪಾಸ್ತೇ ಸರ್ವಂ ಹೈವಾಸ್ಮಿಂಲ್ಲೋಕ ಆಯುರೇತಿ, ನೈನಂ ಪುರಾ ಕಾಲಾತ್ ಪ್ರಾಣೋ ಜಹಾತಿ ॥ ೧೦ ॥**

ಯಂತಂ ಪಶ್ಚಾತ್=ಹೋಗುತ್ತಿರುವವನ ಹಿಂದೆ ಯಃ ಏವ ಅಯಂ ಶಬ್ದಃ= ಯಾವ ಈ ಶಬ್ದವು ಅನೂದೇತಿ=ಉಂಟಾಗುತ್ತದೆಯೊ; ಅಸುಃ=ಪ್ರಾಣವು; ಅಸ್ಮಿನ್ ಲೋಕೇ=ಈ ಲೋಕದಲ್ಲಿ ಸರ್ವಂ ಹ ಏವ ಆಯುಃ=ಪೂರ್ಣಾಯುಸ್ಸನ್ನು ಏತಿ=ಪಡೆಯುತ್ತಾನೆ; ಕಾಲಾತ್ ಪುರಾ=ಕಾಲಕ್ಕಿಂತ ಮೊದಲು ಪ್ರಾಣಃ=ಪ್ರಾಣವು ಏನಂ=ಇವನನ್ನು ನ ಜಹಾತಿ=ಬಿಡುವುದಿಲ್ಲ.

೧೦. ಗಾರ್ಗ್ಯ: 'ಮನುಷ್ಯನು ನಡೆಯುತ್ತಿರುವಾಗ ಅವನ ಹಿಂದೆ ಉಂಟಾಗುವ ಶಬ್ದವನ್ನು[1] ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು: 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಪ್ರಾಣವೆಂದು ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಈ ಲೋಕದಲ್ಲಿ ಪೂರ್ಣಾಯುಸ್ಸನ್ನೇ ಪಡೆಯುತ್ತಾನೆ[2] ಮತ್ತು ಕಾಲಕ್ಕಿಂತ ಮೊದಲು ಇವನನ್ನು ಪ್ರಾಣವು ಬಿಡುವುದಿಲ್ಲ.

[[1] ಮತ್ತು ಶರೀರಧಾರಣೆಗೆ ಕಾರಣವಾದ ಪ್ರಾಣ.

[2] ಕರ್ಮಫಲವನ್ನು ಅನುಸರಿಸುವ ಜೀವನವನ್ನು.

[3] ಕರ್ಮಫಲವು ವಿಧಿಸಿರುವ ಕಾಲಕ್ಕಿಂತ ಮೊದಲು ರೋಗಾದಿಗಳಿಂದ ನರಳಿದರೂ ಇವನು ಸಾಯುವುದಿಲ್ಲ ]

**ಸ ಹೋವಾಚ ಗಾರ್ಗ್ಯಃ, ಯ ಏವಾಯಂ ದಿಕ್ಷು ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತ-ಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ದ್ವಿತೀಯೋಽನಪಗ ಇತಿ ವಾ ಅಹಮೇತಮುಪಾಸ ಇತಿ, ಸ ಯ ಏತಮೇವಮುಪಾಸ್ತೇ ದ್ವಿತೀಯವಾನ್ ಹ ಭವತಿ, ನಾಸ್ಮಾದ್ಗಣಶ್ಛಿದ್ಯತೇ ॥ ೧೧ ॥**

ದಿಕ್ಷು=ದಿಕ್ಕುಗಳಲ್ಲಿ; ದ್ವಿತೀಯಃ=ಎರಡನೆಯವನು ಅನಪಗಃ=ಬಿಟ್ಟು ಹೋಗದವನು; ದ್ವಿತೀಯವಾನ್ ಹ ಭವತಿ=ಎರಡನೆಯವನನ್ನು ಹೊಂದಿರುತ್ತಾನೆ,

ಅಸ್ಮಾತ್=ಇವನಿಂದ ಗಣಃ=ಗಣವು, ಪರಿಜನವರ್ಗವು ನ ಛಿದ್ಯತೇ=ವಿಚ್ಛಿನ್ನವಾಗುವುದಿಲ್ಲ. [ಉಳಿದುದು ಹಿಂದಿನಂತೆಯೇ]

೧೧. ಗಾರ್ಗ್ಯ : 'ದಿಕ್ಕುಗಳಲ್ಲಿರುವ[1] ಈ ಪುರುಷನನ್ನೇ[2] ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು : 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ, ಎರಡನೆಯವನೆಂದೂ ಬಿಟ್ಟುಹೋಗದವನೆಂದೂ ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಎರಡನೆಯವನಿಂದ ಕೂಡಿರುತ್ತಾನೆ ಮತ್ತು ಇವನ ಪರಿಜನವರ್ಗವು ಇವನನು ಬಿಡುವುದಿಲ್ಲ.

[[1] ಮತ್ತು ಕರ್ಣಗಳಲ್ಲಿಯೂ ಹೃದಯದಲ್ಲಿಯೂ ಇರುವ.
[2] ಅವಿಯುಕ್ತಸ್ವಭಾವದವರಾದ ಅಶ್ವಿನೀದೇವತೆಗಳು.]

**ಸ ಹೋವಾಚ ಗಾರ್ಗ್ಯಃ ; ಯ ಏವಾಯಂ ಛಾಯಾಮಯಃ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ; ಸ ಹೋವಾಚಾ- ಜಾತಶತ್ರುಃ ; ಮಾ ಮೈತಸ್ಮಿನ್ ಸಂವದಿಷ್ಠಾಃ, ಮೃತ್ಯುರಿತಿ ವಾ ಅಹಮೇತಮುಪಾಸ ಇತಿ ; ಸ ಯ ಏತಮೇವಮುಪಾಸ್ತೇ ಸರ್ವಂ ಹೈವಾಸ್ಮಿಂಲ್ಲೋಕ ಆಯುರೇತಿ, ನೈನಂ ಪುರಾ ಕಾಲಾ- ನ್ಮೃತ್ಯುರಾಗಚ್ಛತಿ ॥ ೧೨ ॥**

ಛಾಯಾಮಯಃ=ಹೊರಗಿನ ಕತ್ತಲೆಯಲ್ಲಿರುವ; ಮೃತ್ಯುಃ=ಮೃತ್ಯುವು ಕಾಲಾತ್ ಪುರಾ=ಕಾಲಕ್ಕೆ ಮೊದಲು ಏನಂ=ಇವನನ್ನು ಮೃತ್ಯುಃ=ಮೃತ್ಯುವು ನ ಆಗಚ್ಛತಿ= ಸಮೀಪಿಸುವುದಿಲ್ಲ. [ಉಳಿದುದು ಹಿಂದಿನಂತೆಯೇ.]

೧೨. ಗಾರ್ಗ್ಯ : 'ಹೊರಗಿನ ಕತ್ತಲೆಯಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.

ಅಜಾತಶತ್ರು : 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಮೃತ್ಯುವೆಂದು ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೊ ಅವನು ಈ ಲೋಕ

ದಲ್ಲಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ ಮತ್ತು ಇವನ ಕಾಲಕ್ಕೆ ಮೊದಲು ಮೃತ್ಯುವು ಇವನನ್ನು ಸಮೀಪಿಸುವುದಿಲ್ಲ.[2]

[[1] ಮತ್ತು ಒಳಗೆ ಆವರಣರೂಪವಾಗಿರುವ ಅಜ್ಞಾನದಲ್ಲಿಯೂ ಹೃದಯ ದಲ್ಲಿಯೂ ಇರುವ.

[2] ಹತ್ತನೆಯ ಮಂತ್ರದ ಭಾಷ್ಯದಲ್ಲಿ ರೋಗಾದಿಗಳಿಂದ ನರಳಿದರೂ ಉಪಾಸಕನು ಸಾಯುವುದಿಲ್ಲ ಎಂದು ಹೇಳಿದ್ದಾಯಿತು. ಇಲ್ಲಿನ ವಿಶೇಷವೇನೆಂದರೆ ಮೃತ್ಯುವು ಬರದಿರುವ ವರೆಗೆ ಯಾವ ರೋಗವೂ ಬರುವುದಿಲ್ಲ.]

**ಸ ಹೋವಾಚ ಗಾರ್ಗ್ಯಃ, ಯ ಏವಾಯಮಾತ್ಮನಿ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ; ಸ ಹೋವಾಚಾಜಾತ-ಶತ್ರುಃ, ಮಾ ಮೈತಸ್ಮಿನ್ ಸಂವದಿಷ್ಠಾಃ, ಆತ್ಮನ್ವೀತಿ ವಾ ಅಹ ಮೇತ-ಮುಪಾಸ ಇತಿ; ಸ ಯ ಏತಮೇವಮುಪಾಸ್ತೆ ಆತ್ಮನ್ವೀ ಹ ಭವತಿ, ಆತ್ಮನ್ವಿನೀ ಹಾಸ್ಯ ಪ್ರಜಾ ಭವತಿ; ಸ ಹ ತೂಷ್ಣೀ ಮಾಸಗಾರ್ಗ್ಯಃ ॥ ೧೩ ॥**

ಆತ್ಮನಿ=ಆತ್ಮನಲ್ಲಿರುವ, ಹಿರಣ್ಯಗರ್ಭನಲ್ಲಿರುವ, ಆತ್ಮನ್ವೀ=ವಶ್ಯಾತ್ಮನು, ಸಃ ಗಾರ್ಗ್ಯಃ=ಆ ಗಾರ್ಗ್ಯನು ತೂಷ್ಣೀಂ ಆಸ=ಸುಮ್ಮನಾದನು. [ಉಳಿದುದು ಹಿಂದಿನಂತೆಯೇ.]

೧೩. ಗಾರ್ಗ್ಯ: 'ಹಿರಣ್ಯಗರ್ಭನಲ್ಲಿರುವ[1] ಈ ಪುರುಷನನ್ನೇ ಬ್ರಹ್ಮವೆಂದು ಉಪಾಸಿಸುತ್ತೇನೆ.'

ಅಜಾತಶತ್ರು: 'ಈ ವಿಷಯದಲ್ಲಿ ಹೀಗೆ ಮಾತನಾಡಬೇಡ. ಆತ್ಮವಶ್ಯನೆಂದು[2] ಇವನನ್ನೇ ನಾನು ಉಪಾಸಿಸುತ್ತೇನೆ.'

ಯಾವನು ಇವನನ್ನು ಹೀಗೆ ಉಪಾಸಿಸುತ್ತಾನೆಯೋ ಅವನು ಆತ್ಮವಶ್ಯಗುತ್ತಾನೆ ಮತ್ತು ಸಂತತಿಯು ಆತ್ಮವಶ್ಯವಾಗುವುದು. ಗಾರ್ಗ್ಯನು ಸುಮ್ಮನಾದನು.[3]

[[1] ಮತ್ತು ಬುದ್ಧಿಯಲ್ಲಿಯೂ ಹೃದಯದಲ್ಲಿಯೂ ಇರುವ.

[2] ಸಂಯತಬುದ್ಧಿಯೆಂದು.

[3] ಜ್ಞಾನಿಯಾದ ಅಜಾತಶತ್ರುವು ಇವನ ಬ್ರಹ್ಮಗಳನ್ನೆಲ್ಲ ನಿರಾಕರಿಸಿದುದರಿಂದ ಗಾರ್ಗ್ಯನ ಬ್ರಹ್ಮಜ್ಞಾನವೆಲ್ಲ ಮುಗಿದುಹೋಗಿ ಸುಮ್ಮನಾದನು.]

**ಸ ಹೋವಾಚಾಜಾತಶತ್ರುಃ, ಏತಾವನ್ನೂ ೩ ಇತಿ; ಏತಾವದ್ಧೀತಿ; ನೈತಾವತಾ ವಿದಿತಂ ಭವತೀತಿ; ಸ ಹೋವಾಚ ಗಾರ್ಗ್ಯಃ, ಉಪ ತ್ವಾ ಯಾನೀತಿ || ೧೪ ||**

ಸಃ ಅಜಾತಶತ್ರುಃ ಉವಾಚ ಹ—ಏತಾವತ್ ನೂ ೩=ಇಷ್ಟೇಯೊ ಇತಿ; [ಗಾರ್ಗ್ಯ]—ಏತಾವತ್ ಹಿ=ಇಷ್ಟೇ ಇತಿ; [ಅಜಾತಶತ್ರು]—ಏತಾವತಾ=ಇಷ್ಟರಿಂದ ವಿದಿತಂ ನ ಭವತಿ=[ಬ್ರಹ್ಮನನ್ನು] ಅರಿತದ್ದಾಗಲಿಲ್ಲ ಇತಿ; ಸಃ ಗಾರ್ಗ್ಯಃ ಉವಾಚ ಹ—ತ್ವಾ ಉಪಯಾನಿ=ನಿನ್ನ ಬಳಿಗೆ ಸೇರುತ್ತೇನೆ ಇತಿ.

೧೪ ಅಜಾತಶತ್ರು : '(ನೀನು ಅರಿತುಕೊಂಡಿರುವ ಬ್ರಹ್ಮವು) ಇಷ್ಟೇಯೊ ?'

ಗಾರ್ಗ್ಯ : '(ನನಗೆ ತಿಳಿದಿರುವುದು) ಇಷ್ಟೇ.'

ಅಜಾತಶತ್ರು: 'ಇಷ್ಟನ್ನು (ಅರಿತುಕೊಂಡದ್ದರಿಂದ ಬ್ರಹ್ಮವನ್ನು ಅರಿತಂತಾಗಲಿಲ್ಲ.'

ಗಾರ್ಗ್ಯ : '(ಶಿಷ್ಯನಾಗಿ) ನಿನ್ನನ್ನು ಬಳಿಸಾರುತ್ತೇನೆ.[1]

[[1] ಶಿಷ್ಯನಾಗದವನಿಗೆ ಉಪದೇಶವನ್ನು ಮಾಡಕೂಡದೆಂಬ ಆಚಾರವಿಧಿಯು ಗಾರ್ಗ್ಯನಿಗೆ ತಿಳಿದದ್ದರಿಂದ ಉಪ ತ್ವಾ ಯಾನಿ ಎಂದು ಹೇಳಿದನು.]

**ಸ ಹೋವಾಚಾಜಾತಶತ್ರುಃ, ಪ್ರತಿಲೋಮಂ ಚೈತದ್ಯದ್ಬ್ರಾಹ್ಮಣಃ ಕ್ಷತ್ರಿಯಮುಪೇಯಾತ್, ಬ್ರಹ್ಮ ಮೇ ವಕ್ಷ್ಯತೀತಿ ವ್ಯೇವ ತ್ವಾ ಜ್ಞಪಯಿಷ್ಯಾಮೀತಿ; ತಂ ಪಾಣಾವಾದಾಯೋತ್ತಸ್ಥೌ, ತೌ ಹ ಪುರುಷಂ ಸುಪ್ತಮಾಜಗ್ಮತುಃ, ತಮೇತೈರ್ನಾಮಭಿರಾಮಂತ್ರಯಾಂಚಕ್ರೇ, ಬೃಹನ್ ಪಾಂಡರವಾಸಃ ಸೋಮ ರಾಜನ್ನಿತಿ; ಸ ನೋತ್ತಸ್ಥೌ, ತಂ ಪಾಣಿನಾಽಽಪೇಷಂ ಬೋಧಯಾಂಚಕಾರ, ಸ ಹೋತ್ತಸ್ಥೌ || ೧೫ ||**

ಸಃ ಅಜಾತಶತ್ರುಃ ಉವಾಚ=ಏತತ್ ಚ=ಇದು ಪ್ರತಿಲೋಮಂ=ಪ್ರತಿಲೋಮವು ಯತ್=ಯಾವುದೆಂದರೆ ಬ್ರಹ್ಮ=ಬ್ರಹ್ಮವನ್ನು ಮೇ=ನನಗೆ ವಕ್ಷ್ಯತಿ=ಉಪದೇಶಿಸುವನು ಇತಿ=ಎಂದು ಬ್ರಾಹ್ಮಣಃ=ಬ್ರಾಹ್ಮಣನು ಕ್ಷತ್ರಿಯಂ=ಕ್ಷತ್ರಿಯನನ್ನು ಉಪೇಯಾತ್=ಬಳಿಸಾರುವುದು ; ತ್ವಾ=ನಿನಗೆ ವಿಜ್ಞಪಯಿಷ್ಯಾಮಿ ಏವ=ಉಪದೇಶಿಸುತ್ತೇನೆ ಇತಿ=ಎಂದು, ತಂ=ಅವನನ್ನು ಪಾಣೌ ಆದಾಯ=ಕೈಯಲ್ಲಿ ಹಿಡಿದುಕೊಂಡು ಉತ್ತಸ್ಥೌ=ಎದ್ದನು ; ತೌ ಹ=ಅವರಿಬ್ಬರೂ ಸುಪ್ತಂ ಪುರುಷಂ=

ನಿದ್ರಿಸುತ್ತಿದ್ದ ಮನುಷ್ಯನಲ್ಲಿಗೆ ಆಜಗ್ಮತುಃ=ಬಂದರು ; ತಂ=ಆವನನ್ನು ಏತೈಃ ನಾಮಭಿಃ=ಈ ಹೆಸರುಗಳಿಂದ ಆಮಂತ್ರಯಾಂಚಕ್ರೇ = ಕರೆದನು —ಬೃಹನ್= ಮಹಾನ್ ಪಾಂಡರವಾಸಾಃ=ಶ್ವೇತಾಂಬರಧಾರಿಯೆ ರಾಜನ್=ರಾಜನೆ ಸೋಮ= ಸೋಮನೆ ಇತಿ=ಎಂದು ; ಸಃ=ಅವನು ನ ಉತ್ತಸ್ಥೌ=ಏಳಲಿಲ್ಲ , ತಂ=ಅವನನ್ನು ಪಾಣಿನಾ=ಕೈಯಿಂದ ಆಪೇಷಂ=ಎಳೆದನು, ಬೋಧಯಾಂಚಕಾರ=ಎಚ್ಚರಿಸಿದನು ; ಸಃ=ಅವನು ಉತ್ತಸ್ಥೌ=ಎದ್ದನು

೧೫. ಅಜಾತಶತ್ರು · "ಇವನು ನನಗೆ ಬ್ರಹ್ಮವನ್ನು ಉಪದೇಶಿಸು ವನು" ಎಂದು ಬ್ರಾಹ್ಮಣನು ಕ್ಷತ್ರಿಯನ ಬಳಿಗೆ (ಶಿಷ್ಯನಾಗಿ) ಬರುವುದು ಪ್ರತಿಲೋಮವು. (ಆದರೂ) ನಿನಗೆ ಉಪದೇಶಿಸುತ್ತೇನೆ.'

ಅಜಾತಶತ್ರುವು ಗಾರ್ಗ್ಯನನ್ನು ಕೈಯಲ್ಲಿ ಹಿಡಿದುಕೊಂಡು ಎದ್ದನು. ಅವರಿಬ್ಬರೂ ನಿದ್ರಿಸುತ್ತಿದ್ದ ಒಬ್ಬ ಮನುಷ್ಯನಲ್ಲಿಗೆ ಬಂದರು. ಅಜಾತ ಶತ್ರುವು ಅವನನ್ನು ಈ ಹೆಸರುಗಳಿಂದ ಕರೆದನು : 'ಓ ಮಹಾನ್, ಶ್ವೇತಾಂಬರನೆ, ಸೋಮರಾಜನೆ.' ಅವನು ಏಳಲಿಲ್ಲ. ರಾಜನು ಅವನನ್ನು ಪುನಃ ಪುನಃ ತನ್ನ ಕೈಯಿಂದ ಎಳೆದು ಎಚ್ಚರಿಸಿದನು. ಅವನು ಎದ್ದನು.[1]

[[1] ಗಾರ್ಗ್ಯನು ಯಾವ ಪುರುಷನನ್ನು ಉಪದೇಶಿಸಬೇಕೆಂದು ಪ್ರಯತ್ನಿಸಿದನೊ ಅವನು ಶರೀರದಲ್ಲಿ ಕರ್ತೃವೂ ಭೋಕ್ತೃವೂ ಆದ ಬ್ರಹ್ಮವಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇದರಿಂದ ಪ್ರಾಣನಿಗೆ ಕರ್ತೃತ್ವ-ಭೋಕ್ತೃತ್ವಗಳಿಲ್ಲವೆಂದೂ ಪ್ರಾಣನಿಗೂ ಕರಣಗಳಿಗೂ ಈಶ್ವರನಾದ ಬ್ರಹ್ಮವೇ ಕರ್ತೃವಾಗಿಯೂ ಭೋಕ್ತೃ ವಾಗಿಯೂ ಕಾಣುವನೆಂದೂ ಸ್ಪಷ್ಟವಾಗುತ್ತದೆ.]

**ಸ ಹೋವಾಚಾಜಾತಶತ್ರುಃ, ಯತ್ರೈಷ ಏತತ್ ಸುಪ್ತೋಽ- ಭೂದ್ಯ ಏಷ ವಿಜ್ಞಾನಮಯಃ ಪುರುಷಃ, ಕ್ವೈಷ ತದಾಭೂತ್, ಕುತ ಏತದಾಗಾದಿತಿ ; ತದು ಹ ನ ಮೇನೇ ಗಾರ್ಗ್ಯಃ || ೧೬ ||**

ಸಃ ಅಜಾತಶತ್ರುಃ ಉವಾಚ ಹ— ಯಃ ಏಷಃ ವಿಜ್ಞಾನಮಯಃ ಪುರುಷಃ= ಆ ಈ ವಿಜ್ಞಾನಮಯನಾದ ಪುರುಷನು ಏಷಃ=ಇವನು ಯತ್ರ=ಯಾವಾಗ ಏತತ್ ಸುಪ್ತಃ ಅಭೂತ್=ಹೀಗೆ ಮಲಗಿದ್ದನೊ, ಏಷಃ=ಇವನು ತದಾ=ಆಗ ಕ್ವ ಅಭೂತ್ =ಎಲ್ಲಿದ್ದನು? ಕುತಃ=ಎಲ್ಲಿಂದ ಏತತ್=ಹೀಗೆ ಆಗಾತ್=ಬಂದನು ? ಇತಿ, ಗಾರ್ಗ್ಯಃ= ಗಾರ್ಗ್ಯನು ತತ್ ಉ ಹ=ಅದನ್ನು ನ ಮೇನೇ=ತಿಳಿಯದಿದ್ದನು.

೧೬. ಅಜಾತಶತ್ರು : 'ಈ ವಿಜ್ಞಾನಮಯನಾದ[1] ಪುರುಷನು ನಿದ್ರಿಸುತ್ತಿದ್ದಾಗ ಎಲ್ಲಿದ್ದನು ? ಎಲ್ಲಿಂದ ಹೀಗೆ ಬಂದನು ?'[2]

ಇದು ಗಾರ್ಗ್ಯನಿಗೆ ತಿಳಿದಿರಲಿಲ್ಲ.

[ಪ್ರಾಣ, ಕರಣಗಳು ಇವುಗಳಿಗಿಂತ ವ್ಯತಿರಿಕ್ತನಾದ ಆತ್ಮನು ಇದ್ದಾನೆಂದು ಪ್ರತಿಪಾದಿಸಿದ ಮೇಲೆ ಅಜಾತಶತ್ರುವು ಹೇಳುತ್ತಾನೆ.

1 ವಿಜ್ಞಾನವೆಂದರೆ ಅಂತಃಕರಣ ಅಥವಾ ಬುದ್ಧಿ ; ತನ್ಮಯನು ವಿಜ್ಞಾನಮಯನು. ಯಾವನು ಬುದ್ಧಿಯಲ್ಲಿ ಮತ್ತು ಬುದ್ಧಿಯ ದ್ವಾರಾ ಅರಿಯಲ್ಪಡುವವನೊ ಮತ್ತು ಬುದ್ಧಿಯಿಂದ ಅರಿಯುವವನೊ ಅವನು ವಿಜ್ಞಾನಮಯನು ಎಂದರ್ಥ. ಇಲ್ಲಿ ಮಯಟ್ ಪ್ರತ್ಯಯಕ್ಕೆ 'ಅವಯವ', 'ಉಪಮಾನ' ಎಂಬ ಅರ್ಥಗಳು ಹೊಂದುವುದಿಲ್ಲ, 'ಪೂರ್ಣ' ಎಂಬ ಅರ್ಥದಲ್ಲಿಯೇ ತೆಗೆದುಕೊಳ್ಳಬೇಕು.

2 ಆತ್ಮನ ಸ್ವಭಾವವನ್ನು ತಿಳಿಸುವುದಕ್ಕೆ ಈ ಪ್ರಶ್ನೆಗಳು ಬಂದಿವೆ. ಎಚ್ಚರವಾಗುವುದಕ್ಕೆ ಮೊದಲು ಇಂದ್ರಿಯಾದಿಗಳ ಕಾರ್ಯವಿಲ್ಲದುದರಿಂದ ಆತ್ಮನು ಕ್ರಿಯಾ-ಕಾರಕ-ಫಲಗಳಿಗೆ ವಿರುದ್ಧವಾದ ಸ್ವಭಾವವುಳ್ಳವನು ಎಂದು ಅಭಿಪ್ರಾಯ. ಸುಷುಪ್ತಿಯಲ್ಲಿರುವಾಗ ಹಿಂದಿನ ಕರ್ಮದ ಫಲಗಳಾದ ಸುಖದುಃಖಗಳ ಅನುಭವವು ಉಂಟಾಗುವುದಿಲ್ಲ. ಇಾತಹ ಸ್ವರೂಪದಿಂದ ಜಾರಿದಾಗ ಸಂಸಾರಸ್ವಭಾವವು ಉಂಟಾಗುತ್ತದೆ. ಆತ್ಮನ ಸರ್ವಾತೀತತ್ವವನ್ನು ಅಜಾತಶತ್ರುವು ಉಪದೇಶಿಸುತ್ತಾನೆ.]

**ಸ ಹೋವಾಚಾಜಾತಶತ್ರುಃ, ಯತ್ರೈಷ ಏತತ್ ಸುಪ್ತೋಽಭೂದ್ಯ ಏಷ ವಿಜ್ಞಾನಮಯಃ ಪುರುಷಃ ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿಂಛೇತೇ ; ತಾನಿ ಯದಾ ಗೃಹ್ಣಾತ್ಯಥ ಹೈತತ್ ಪುರುಷಃ ಸ್ವಪಿತಿ ನಾಮ ; ತದ್ಗೃಹೀತ ಏವ ಪ್ರಾಣೋ ಭವತಿ, ಗೃಹೀತಾ ವಾಕ್, ಗೃಹೀತಂ ಚಕ್ಷುಃ, ಗೃಹೀತಂ ಶ್ರೋತ್ರಂ, ಗೃಹೀತಂ ಮನಃ ॥ ೧೭ ॥**

ಸಃ ಅಜಾತಶತ್ರುವು ಉವಾಚ ಹ—ಯಃ ಏಷಃ ವಿಜ್ಞಾನಮಯಃ ಪುರುಷಃ ಏಷಃ ಯತ್ರ ಏತತ್ ಸುಪ್ತಃ ಅಭೂತ್ [ಹಿಂದಿನಂತೆಯೆ] ತತ್=ಆಗ ಏಷಾಂ ಪ್ರಾಣಾನಾಂ=ಈ ವಾಗಾದಿ ಪ್ರಾಣಗಳ ವಿಜ್ಞಾನಂ=ಕೆಲಸವನ್ನು ವಿಜ್ಞಾನೇನ=ವಿಶೇಷಜ್ಞಾನದಿಂದ ಆದಾಯ=ಹಿಂದಕ್ಕೆ ಎಳೆದುಕೊಂಡು ಯಃ ಏಷಃ ಅಂತರ್ಹೃದಯೇ=ಯಾವ ಈ ಅಂತರ್ಹೃದಯಲ್ಲಿರುವ ಆಕಾಶಃ ತಸ್ಮಿನ್=ಆಕಾಶಶಬ್ದವಾಚ್ಯನಾದ ಪರಮಾತ್ಮನಲ್ಲಿ ಶೇತೇ=ಮಲಗಿರುತ್ತಾನೆ ; ಯದಾ=ಯಾವಾಗ

ತಾನಿ=ಅವುಗಳನ್ನು ಗೃಹ್ಣಾತಿ=ಎಳೆದುಕೊಳ್ಳುತ್ತಾನೆಯೊ ಅಥ ಹ=ಆಗ ಪುರುಷಃ [ಪುರುಷಸ್ಯ]=ಪುರುಷನಿಗೆ ಸ್ವಪಿತಿ-ಸ್ವಪಿತಿ ಎಂಬ ಏತತ್ ನಾಮ=ಈ ಹೆಸರು [ಬಂದಿರುತ್ತದೆ] ; ತತ್=ಆಗ ಪ್ರಾಣಃ=ಪ್ರಾಣವು, ಘ್ರಾಣೇಂದ್ರಿಯವು ಗೃಹೀತಃ ಏವ ಭವತಿ=ಎಳೆಯಲ್ಪಟ್ಟಿರುತ್ತದೆ, ವಾಕ್ ಗೃಹೀತಾ=ವಾಕ್ಕು ಎಳೆಯಲ್ಪಟ್ಟಿರುತ್ತದೆ, ಚಕ್ಷುಃ ಗೃಹೀತಂ=ಚಕ್ಷುಸ್ಸು ಎಳೆಯಲ್ಪಟ್ಟಿರುತ್ತದೆ, ಶ್ರೋತ್ರಂ ಗೃಹೀತಂ=ಶ್ರೋತ್ರವು ಎಳಯಲ್ಪಟ್ಟಿರುತ್ತದೆ, ಮನಃ ಗೃಹೀತಂ=ಮನಸ್ಸು ಎಳೆಯಲ್ಪಟ್ಟಿರುತ್ತದೆ.

೧೭. ಅಜಾತಶತ್ರು : 'ಈ ವಿಜ್ಞಾನಮಯನಾದ ಪುರುಷನು ನಿದ್ರಿಸುತ್ತಿರುವಾಗ ಅವನು ವಾಗಾದಿಪ್ರಾಣಗಳ ಕೆಲಸನ್ನು[1] ವಿಶೇಷಜ್ಞಾನದಿಂದ[2] ಹಿಂದಕ್ಕೆ ಎಳೆದುಕೊಂಡು ಅಂತರ್ಹೃದಯದಲ್ಲಿರುವ ಆಕಾಶಶಬ್ದವಾಚ್ಯನಾದ ಪರಮಾತ್ಮನಲ್ಲಿ ಮಲಗಿರುತ್ತಾನೆ.[3] ಯಾವಾಗ ಇವನು (ಹೀಗೆ) ಇಂದ್ರಿಯ-ಸಮೂಹವನ್ನು ಹಿಂದಕ್ಕೆ ಎಳೆದುಕೊಳ್ಳುತ್ತಾನೆಯೊ ಆಗ ಅವನಿಗೆ 'ಸ್ವಪಿತಿ'[4] ಎಂಬ ಹೆಸರು ಉಂಟಾಗುತ್ತದೆ. ಆಗ ಘ್ರಾಣೇಂದ್ರಿಯವು ಎಳೆಯಲ್ಪಟ್ಟಿರುತ್ತದೆ, ವಾಕ್ಕು ಎಳೆಯಲ್ಪಟ್ಟಿರುತ್ತದೆ, ಚಕ್ಷುಸ್ಸು ಎಳೆಯಲ್ಪಟ್ಟಿರುತ್ತದೆ, ಶ್ರೋತ್ರವು ಎಳೆಯಲ್ಪಟ್ಟಿರುತ್ತದೆ ಮನಸ್ಸು[5] ಎಳೆಯಲ್ಪಟ್ಟಿರುತ್ತದೆ.

[[1] ಆಯಾ ವಿಷಯಗತವಾದ ಪ್ರಕಾಶನಸಾಮರ್ಥ್ಯವನ್ನು.

[2] ಅಂತಃಕರಣವು ಆತ್ಮನ ಉಪಾಧಿ, ಅಜ್ಞಾನವು ಈ ಅಂತಃಕರಣದ ಉಪಾದಾನ-ಕಾರಣ ಈ ಅಜ್ಞಾನದಿಂದ ಉತ್ಪನ್ನವಾದ ಅಂತಃಕರಣದಲ್ಲಿ ಅಖಂಡ ಚೈತನ್ಯದ ಯಾವ ಆಭ್ಯಾಸವು ಉಂಟಾಗುವುದೊ ಅದೇ ಇಲ್ಲಿ ವಿಜ್ಞಾನಶಬ್ದದ ಅರ್ಥ. ಅಂತಃ-ಕರಣದಲ್ಲಿ ಚಿದಾಭಾಸವಾಗದಿದ್ದರೆ ವಿಶೇಷಜ್ಞಾನವು ಉತ್ಪನ್ನವಾಗುವುದಿಲ್ಲ.

[3] ಅಂತಃಕರಣವೆಂಬ ಉಪಾಧಿಯಿಂದ ಆಗಿದ್ದ ವಿಶೇಷಾತ್ಮಸ್ವರೂಪವನ್ನು ಬಿಟ್ಟು ಯಾವ ವಿಶೇಷವೂ ಇಲ್ಲದ ಸ್ವಾಭಾವಿಕವಾದ ಕೇವಲ ಆತ್ಮನಲ್ಲಿಯೇ ಇರುತ್ತಾನೆ.

[4] ಸ್ವಮೇವ ಆತ್ಮಾನಮ್ ಅಪೀತಿ ಅಪಿಗಚ್ಛತಿ ಇತಿ ಸ್ವಪಿತಿ ಇತ್ಯುಚ್ಯತೇ.

[5] ಇಂದ್ರಿಯಗಳೆಲ್ಲ ಉಪಸಂಹರಿಸಲ್ಪಟ್ಟಿರುವುದರಿಂದ ಕ್ರಿಯಾ-ಕಾರಕ-ಫಲಗಳಿಲ್ಲದೆ ಆತ್ಮನು ಸ್ವಾತ್ಮಸ್ಥನಾಗಿಯೇ ಇರುತ್ತಾನೆ ಎಂದು ನಿಶ್ಚಯವಾಗುತ್ತದೆ ]

**ಸ ಯತ್ರೈತತ್ ಸ್ವಪ್ನ್ಯಯಾ ಚರತಿ ತೇ ಹಾಸ್ಯ ಲೋಕಾಃ, ತದುತೇವ ಮಹಾರಾಜೋ ಭವತಿ, ಉತೇವ ಮಹಾಬ್ರಾಹ್ಮಣಃ, ಉತೇವೋಚ್ಚಾವಚಂ ನಿಗಚ್ಛತಿ; ಸ ಯಥಾ ಮಹಾರಾಜೋ**